RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಆಗಸ್ಟ್ ೨೯, ೨೦೧೩ (ಭಾದ್ರಪದ ೭, ಶಕ ವರ್ಷ ೧೯೩೫)<br>Bangalore, Thursday, August 29, 2013 (Bhadrapada 7, Shaka Varsha 1935) | ಸಂಚಿಕೆ ೩೫<br>Issue 35 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಎಸ್. ಹರಿಪ್ರಸನ್ನ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಪಾವಗಡ, ತುಮಕೂರು ಜಿಲ್ಲೆ ಇವರ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಪಿಜಿ/ಬೆಂವಿ-11/ತು/22/2004-05, ದಿನಾಂಕ : 27-3-2013.

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಡಾ॥ ಎಸ್. ಹರಿಪ್ರಸನ್ನ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಪಾವಗಡ, ತುಮಕೂರು ಜಿಲ್ಲೆ ಇವರು ದಿನಾಂಕ : 1-9-2004 ರಂದು ಸರ್ಕಾರಿ ಸೇವೆಗೆ ಸೇರಿ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾಗಿರುತ್ತಾರೆ. ಆದುದರಿಂದ ಸದರಿಯವರು ಖಾಯಂಪೂರ್ವ ಸೇವಾವಧಿಯಲ್ಲಿಯೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಇವರಿಗೆ ದಂಡನೆ ವಿಧಿಸುವಂತೆ ಕೋರಿರುತ್ತಾರೆ.

ಸರ್ಕಾರವು ಲಭ್ಯವಿರುವ ದಾಖಲೆ ಹಾಗೂ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಡಾ॥ ಎಸ್. ಹರಿಪ್ರಸನ್ನ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಪಾವಗಡ, ತುಮಕೂರು ಜಿಲ್ಲೆ ಇವರನ್ನು ಅನಧಿಕೃತ ಗೈರುಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1977ರ ನಿಯಮ 6(1) (ಬಿ)ರ ಅಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 92 ಎಂಎಸ್ಎ 2013, ಬೆಂಗಳೂರು, ದಿನಾಂಕ : 27-5-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಡಾ॥ ಎಸ್. ಹರಿಪ್ರಸನ್ನ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಪಾವಗಡ, ತುಮಕೂರು ಜಿಲ್ಲೆ ಇವರನ್ನು ಅನಧಿಕೃತ ಗೈರುಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1977ರ ನಿಯಮ 6(1)(ಬಿ)ರ ಅಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಫ್. ಹುಬ್ಬಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR. 778**

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರ ವಲಯ, ಬೆಂಗಳೂರು ಮಹಾನಗರಪಾಲಿಕೆ, ಬೆಂಗಳೂರು (ಪ್ರಸ್ತುತ ಉಪ ನಿರ್ದೇಶಕರು, ಕ.ರಾ.ಆ.ಕು.ಕ. ಸಂಸ್ಥೆ, ಬೆಂಗಳೂರು) ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

ಓದಲಾಗಿದೆ :

1. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಸಿಟಿ/ಕ್ರೈಂ–51/2005, ದಿನಾಂಕ : 17–12–2005.
2. ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ : ಬಿ12(4)ಪಿಆರ್/709/05–06, ದಿನಾಂಕ : 22–03–2006.
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 67 ಎಂಎಸ್‌ಎ 2006, ದಿನಾಂಕ : 06–04–2006.
4. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ–51/2005, ದಿನಾಂಕ : 05–08–2005.
5. ಸರ್ಕಾರದ ಆದೇಶ ಸಂಖ್ಯೆ : ಆಕುಕ 67 ಎಂಎಸ್‌ಎ 2006, (ಭಾ) ದಿನಾಂಕ : 30–10–2006.
6. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 67 ಎಂಎಸ್‌ಎ 2006 (ಭಾ) ದಿನಾಂಕ : 19–02–2007.
7. ಗೌ॥ ಉಪಲೋಕಾಯುಕ್ತರು, ಕರ್ನಾಟಕ ರಾಜ್ಯ ಬೆಂಗಳೂರು ರವರ ಪತ್ರ ಸಂಖ್ಯೆ : ಕಾಪ್ಟ್/ಉಪ ಲೋಕ್/ಬಿಸಿಡಿ–234/7/ಡಿಆರ್‌ಇ–5, ದಿನಾಂಕ : 19–09–2007.
8. ಸರ್ಕಾರದ ಆದೇಶ ಸಂಖ್ಯೆ : ಆಕುಕ 67 ಎಂಎಸ್‌ಎ 2006 (ಭಾ), 21–01–2008.
9. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ : ಡಿಪಿಜಿ/ಬೆಂನ/09/2006–07, ದಿನಾಂಕ :02–02–2013.
10. ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ವಿಶೇಷ ಪ್ರಕರಣದ ಸಂಖ್ಯೆ : 172/2006ರ ತೀರ್ಪು ದಿನಾಂಕ : 29–12–2012.
11. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)ಸಿಟಿ/ಕ್ರೈಂ–51/2005, ದಿನಾಂಕ : 27–02–2013.
12. ಸರ್ಕಾರದ ಪತ್ರ ಸಂಖ್ಯೆ : ಆಕುಕ 67 ಎಂಎಸ್‌ಎ 1996, ದಿನಾಂಕ : 25–02–2013.
13. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ರವರ ಪತ್ರ ಸಂಖ್ಯೆ : ಪಿಎಸ್‌ಸಿ 206 ಸಿಎನ್‌ಎಸ್ 2012, ದಿನಾಂಕ : 30–04–2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರವನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರಿಗೆ ಕಳುಹಿಸಿ ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರ ವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರು ಬೆಂಗಳೂರು ನಗರ ಪಾಲಿಕೆಯ ವಾರ್ಡ್ ನಂ. 80, 81 ಮತ್ತು 82 ರ ವ್ಯಾಪ್ತಿಯಲ್ಲಿನ ಹೋಟೇಲ್ ಮತ್ತು ಇತರೆ ವಾಣಿಜ್ಯ ಸಂಕೀರ್ಣಗಳಿಂದ ಕಸ ಸಾಗಾಣಿಕೆ ಮಾಡಲು ಶ್ರೀ ಎಂ. ನಾಗರಾಜು, ಹೆಬ್ಬಾಳ, ಬೆಂಗಳೂರು ಇವರಿಂದ ದಿನಾಂಕ : 3–12–2005ರಂದು ರೂ. 8,000/– ಅಕ್ರಮ ಸಂಭಾವನೆಯನ್ನು ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಯಲ್ಲಿ ಸಿಲುಕಿದ್ದು, ಸದರಿಯವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13(1)(ಡಿ) ಸಹವಾಚನ 13(2)ರಡಿಯಲ್ಲಿ ಮೊಕದ್ದಮೆ ಸಂಖ್ಯೆ 51/2005ರಲ್ಲಿ ದಿನಾಂಕ : 03–12–2005 ರಂದು ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಡಾ. ಡಿ. ಚಂದ್ರಶೇಖರ್ ಇವರನ್ನು ದಿನಾಂಕ : 03–12–2005 ರಿಂದ ಅನ್ವಯವಾಗುವಂತೆ ಅಮಾನತ್ತಿನಲ್ಲಿಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರು ಡಾ॥ ಡಿ. ಚಂದ್ರಶೇಖರ್, ವೈದ್ಯಾಧಿಕಾರಿ ಇವರು ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಯಾಗಿರುವುದರಿಂದ ಇವರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳಲು ಮಹಾನಗರ ಪಾಲಿಕೆಯಲ್ಲಿ ಅವಕಾಶವಿಲ್ಲದ್ದರಿಂದ ಮುಂದಿನ ಸೂಕ್ತಕ್ರಮಕ್ಕಾಗಿ ಆರೋಗ್ಯ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ಸೇವೆಯನ್ನು ಬೆಂಗಳೂರು ಮಹಾನಗರ ಪಾಲಿಕೆಯಿಂದ ಮಾತೃ ಇಲಾಖೆಗೆ ಹಿಂಪಡೆದು ಇವರ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ, ದಿನಾಂಕ : 03–12–2005 ರಿಂದ ಜಾರಿಗೆ ಬರುವಂತೆ ಸದರಿಯವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಆಪಾದಿತ ಸಾರ್ವಜನಿಕ ಅಧಿಕಾರಿಯಾದ ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ವಿರುದ್ಧ ದಾಖಲಾಗಿರುವ ಲಂಚ ಪ್ರಕರಣದಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸದರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸದರಿ ಕಾಯ್ದೆಯ ಕಲಂ 19(1)ರ ಅನ್ವಯ ಸರ್ಕಾರದ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸರ್ಕಾರದ ಆದೇಶದಲ್ಲಿ ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರು ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿ ಸದರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಸರ್ಕಾರದ ಅಧಿಸೂಚನೆಯಲ್ಲಿ ಡಾ॥ ಡಿ. ಚಂದ್ರಶೇಖರ್, ತಜ್ಞ ವೈದ್ಯರು, ಆಕುಕ ಸೇವೆಗಳ ಇಲಾಖೆ, ಇವರ ಅಮಾನತ್ತನ್ನು ತೆರವುಗೊಳಿಸಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇರಿಸಿ, ಸಾರ್ವಜನಿಕ ಆಸ್ಪತ್ರೆ, ಶಿಡ್ಲಘಟ್ಟ, ಕೋಲಾರ ಜಿಲ್ಲೆ ಇಲ್ಲಿ ಖಾಲಿ ಇರುವ ಜನರಲ್ ಸರ್ಜನ್ ಹುದ್ದೆಗೆ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪತ್ರದಲ್ಲಿ ಗೌ॥ ಉಪ ಲೋಕಾಯುಕ್ತರು, ಕರ್ನಾಟಕ ರಾಜ್ಯ ಇವರು ಡಾ॥ ಡಿ. ಚಂದ್ರಶೇಖರ್‌ರವರು ಅಕ್ರಮ ಸಂಭಾವನೆ ಪಡೆದು ದುರ್ನಡತೆಗೆ ಎಸಗಿರುವ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 7(2)ರಡಿ ಸ್ವಯಂ ತನಿಖೆ ಕೈಗೊಂಡು, ಸದರಿ ತನಿಖಾ ವರದಿಯನ್ನು ಸದರಿ ಕಾಯ್ದೆಯ ಸೆಕ್ಷನ್ 12(3)ರಡಿ ಸರ್ಕಾರಕ್ಕೆ ಕಳುಹಿಸಿ ಈ ದುರ್ನಡತೆ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕ.ನಾಸೇ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ)ರಡಿಯಲ್ಲಿ ಗೌ॥ ಉಪ ಲೋಕಾಯುಕ್ತರಿಗೆ ವಹಿಸುವಂತೆ ಶಿಫಾರಸ್ಸು ಮಾಡಿದ್ದು, ಅದರಂತೆ ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಡಾ॥ ಡಿ. ಚಂದ್ರಶೇಖರ್ ರವರ ವಿರುದ್ಧದ ಆಪಾದನೆ ಬಗ್ಗೆ ವಿಚಾರಣೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಸರ್ಕಾರದ ಆದೇಶದಲ್ಲಿ ಸದರಿ ಪ್ರಕರಣವನ್ನು ಕ.ನಾ.ಸೇ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ)ರಡಿ ಗೌ॥ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (09) ರಲ್ಲಿ ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರು ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇಲ್ಲಿನ ವಿಶೇಷ ಸಿ.ಸಿ. ಸಂಖ್ಯೆ : 172/2006ಕ್ಕೆ ಸಂಬಂಧಿಸಿದಂತೆ ದಿನಾಂಕ : 29–12–2012ರ ತೀರ್ಪಿನ ಪ್ರತಿಯನ್ನು ಕಳುಹಿಸಿ ಡಾ॥ ಡಿ. ಚಂದ್ರಶೇಖರ್ ಇವರಿಗೆ ಸದರಿ ತೀರ್ಪಿನಲ್ಲಿ ಕಾರಾಗೃಹ ಶಿಕ್ಷೆ ವಿಧಿಸಿರುವುದರಿಂದ ಸೂಕ್ತ ದಂಡನೆಯನ್ನು ವಿಧಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (10)ರ ತೀರ್ಪಿನಲ್ಲಿ ಡಾ॥ ಡಿ. ಚಂದ್ರಶೇಖರ್, ಇವರ ಲಂಚ ಪ್ರಕರಣದ ಆರೋಪಕ್ಕೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತರು, ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇಲ್ಲಿ ಸಲ್ಲಿಸಿದ್ದ ವಿಶೇಷ ಸಿ.ಸಿ. ಸಂಖ್ಯೆ 172/2006ರಲ್ಲಿ ಪ್ರಕರಣವನ್ನು ಸದರಿ ನ್ಯಾಯಾಲಯವು ವಿಚಾರಣೆಗೆ ಒಳಪಡಿಸಿ ದಿನಾಂಕ : 29–12–2012ರಂದು ಈ ಕೆಳಕಂಡಂತೆ ತೀರ್ಪನ್ನು ನೀಡಿರುತ್ತದೆ.

"Under Section 235(2) of Cr. P.C., accused No.1 Dr. Chandrashekar is convicted for the offences punishable under Section 7 and 13(1) (d) punishable under section 13(2) of Prevention of Corruption Act, 1988. His bail bond and surety bond stand cancelled".

ಶಿಕ್ಷೆಯ (Sentence) ಉದ್ಧೃತ ಭಾಗ ಈ ಕೆಳಗಿನಂತಿದೆ

"It is ordered that the Accused No. 1, Dr. Chandrashekar, is sentenced to undergo Rigorous imprisonment for a period of 8 months (Eight months) for the offence punishable under section 7 of Prevention of Corruption Act, and to pay fine of Rs. 3000/- (Rupees Three thousand) in default, to undergo simple imprisonment for 3 months.

Further accused No.1, is further sentenced to undergo Rigorous imprisonment for 1 (ONE) year for the offence punishable under section 13(1)(d) read with section 13(2) of Prevention of Corruption Act and to pay fine of Rs. 5,000/- (Rupees five thousand only), in default, to undergo simple imprisonment for 4 months."

ಮೇಲೆ ಓದಲಾದ ಕ್ರಮ ಸಂಖ್ಯೆ (11)ರ ಪತ್ರದಲ್ಲಿ, ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸದರಿ ಪ್ರಕರಣದಲ್ಲಿ ಆಪಾದಿತ–1, ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರ ವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರಿಗೆ ವಿಶೇಷ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇಲ್ಲಿ ದಿನಾಂಕ : 29–12–2012ರ ತೀರ್ಪಿನಲ್ಲಿ ಕಾರಾಗೃಹ ಶಿಕ್ಷೆ ವಿಧಿಸಿರುವ ಹಿನ್ನೆಲೆಯಲ್ಲಿ ಡಾ॥ ಡಿ. ಚಂದ್ರಶೇಖರ್ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಗೌ॥ ಸರ್ವೋಚ್ಚ ನ್ಯಾಯಾಲಯವು ಕಾಲೇಜು ಶಿಕ್ಷಣ ಉಪ ನಿರ್ದೇಶಕರು (ಆಡಳಿತ) ಮದ್ರಾಸ್ ವಿರುದ್ಧ ಎಸ್. ನಾಗೂರ ಮೀರ್ ಪ್ರಕರಣದಲ್ಲಿ (ಎಐಆರ್ 1995 ಎಸ್‌ಸಿ 1364) ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಇಂತಹ ಪ್ರಕರಣಗಳಲ್ಲಿ ಯಾವ ರೀತಿ ಕ್ರಮವಹಿಸಬೇಕೆಂಬ ಬಗ್ಗೆ ಸಿ.ಆ.ಸು. ಇಲಾಖೆಯು ಸುತ್ತೋಲೆ (ಸಂಖ್ಯೆ : ಸಿಆಸುಇ 9 ಸೇಇವಿ 95, ದಿನಾಂಕ : 26–06–1996) ಹೊರಡಿಸಿದ್ದು. ಈ ಕೆಳಕಂಡಂತೆ ಸೂಚನೆ ನೀಡಿದೆ.

"ಸಂವಿಧಾನದ ಅನುಚ್ಛೇದ 311(2)ರ ಅಡಿಯಲ್ಲಿನ ಎರಡನೇ ಪರಂತುಕದ ಖಂಡ (ಎ)ಯು ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ಧಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ಧಿಯಾಗಿರುವುದನ್ನು ನಿಲಂಬನದಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರೆ ವ್ಯವಹರಣೆ ಹೂಡಿದ್ದಾನೆ ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನದಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(1)ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿರಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(1)ರನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರಿಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆ (acquit) ಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂಥ ಎಲ್ಲ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ."

ಮೇಲೆ ಓದಲಾದ ಕ್ರಮ ಸಂಖ್ಯೆ (12)ರ ಪತ್ರದಲ್ಲಿ ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು (ಪ್ರಸ್ತುತ ಉಪ ನಿರ್ದೇಶಕರು, ಕ.ರಾ.ಆ.ಕು.ಕ. ಸಂಸ್ಥೆ, ಬೆಂಗಳೂರು) ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ : (13)ರಲ್ಲಿ ಕರ್ನಾಟಕ ಲೋಕಸೇವಾ ಆರೋಗವು ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು (ಪ್ರಸ್ತುತ ಉಪ ನಿರ್ದೇಶಕರು, ಕ.ರಾ.ಆ.ಕು.ಕ. ಸಂಸ್ಥೆ, ಬೆಂಗಳೂರು) ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿಯನ್ನು ನೀಡಿರುತ್ತದೆ.

ಆದ್ದರಿಂದ ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು (ಪ್ರಸ್ತುತ ಉಪ ನಿರ್ದೇಶಕರು, ಕ.ರಾ.ಆ.ಕು.ಕ. ಸಂಸ್ಥೆ, ಬೆಂಗಳೂರು) ಇವರಿಗೆ ವಿಶೇಷ ನ್ಯಾಯಾಧೀಶರ ನ್ಯಾಯಾಲಯ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇಲ್ಲಿನ ಪ್ರಕರಣ ಸಂಖ್ಯೆ : 172/2006ರಲ್ಲಿ ದಿನಾಂಕ : 29-12-2006ರಂದು ನೀಡಿರುವ ತೀರ್ಪಿನಲ್ಲಿ ಕಾರಾಗೃಹ ಶಿಕ್ಷೆ ವಿಧಿಸಿರುವುದರಿಂದ ಸದರಿ ವೈದ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 67 ಎಂಎಸ್ಎ 2006, ಬೆಂಗಳೂರು, ದಿನಾಂಕ : 20-07-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ॥ ಡಿ. ಚಂದ್ರಶೇಖರ್, ಹಿಂದಿನ ವೈದ್ಯಾಧಿಕಾರಿ, ಭಾರತೀನಗರವಲಯ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು (ಪ್ರಸ್ತುತ ಉಪನಿರ್ದೇಶಕರು, ಕ.ರಾ.ಆ.ಕು.ಕ. ಸಂಸ್ಥೆ, ಬೆಂಗಳೂರು) ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (viii) ರನ್ವಯ ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 779**
**SC-25**

**ಶಕುಂತಲಾ ಎಸ್. ಚೌಗಲಾ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ : ಆಕುಕ 123 ಆರ್‌ಜಿಯು 2013, ಬೆಂಗಳೂರು, ದಿನಾಂಕ : 03-07-2013.**

ಸರ್ಕಾರದ ಆದೇಶ ಸಂಖ್ಯೆ : ಆಕುಕ 123 ಆರ್‌ಜಿಯು 2013, ದಿನಾಂಕ : 05-06-2013 ಹಾಗೂ 13-06-2013ರ ಆದೇಶ ಭಾಗದ ನಂತರ **"ಹಾಗೆಯೇ, 2013-14 ನೇ ಸಾಲಿಗೆ ಕರ್ನಾಟಕ ರಾಜ್ಯದ ಸರ್ಕಾರಿ ಸ್ವಾಯತ್ತ ವೈದ್ಯಕೀಯ ಕಾಲೇಜುಗಳಲ್ಲಿ ಅಖಿಲ ಭಾರತ ಕೋಟಾದಡಿ ಸರ್ಕಾರಿ ಸ್ನಾತಕೋತ್ತರ ಸೀಟುಗಳನ್ನು ಪಡೆದ ಅಭ್ಯರ್ಥಿಗಳು ಬೇರೆ ರಾಜ್ಯದ ಅಥವಾ ಬೇರೆ ಪರೀಕ್ಷೆಗಳ ಕೌನ್ಸಿಲಿಂಗ್‌ನಲ್ಲಿ ಹಾಜರಾಗಲು ಇಚ್ಚಿಸಿದ್ದು, ಅಖಿಲ ಭಾರತ ಕೋಟಾದಡಿಯಲ್ಲಿ ಪಡೆದಿರುವ ಸ್ನಾತಕೋತ್ತರ ಸೀಟನ್ನು ದಿನಾಂಕ : 20-07-2013 ಕ್ಕಿಂತ ಮುಂಚಿತವಾಗಿ ಅದ್ಯರ್ಪಣೆ ಮಾಡಿದ್ದಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಅವರು ಪಾವತಿಸಬೇಕಾದ ದಂಡವನ್ನು 2013-14ನೇ ಸಾಲಿಗೆ ಅನ್ವಯವಾಗುವಂತೆ ಮಾತ್ರ ಮನ್ನಾ ಮಾಡಿ ಆದೇಶಿಸಿದೆ"** ಎಂಬುದನ್ನು 3ನೇ ಕಂಡಿಕೆಯಾಗಿ ಸೇರ್ಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

**ವಿ. ಸಾಯಿಬಾಬಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ).

**P.R.775**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ತಂಬಾಕು ಮಿಶ್ರಿತ ಗುಟ್ಕಾ ಮತ್ತು ಪಾನ್‌ಮಸಾಲಗಳನ್ನು ನಿಷೇಧಿಸಿರುವ ಆದೇಶವನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ :** 1. ರಾಜ್ಯ ಆಹಾರ ಸುರಕ್ಷತೆ ಆಯುಕ್ತರು, ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ : ಸಾಆಸಂ/ಎಫ್ಎಸ್ಎಸ್ಎ/ಅಸೂ/01/2013-14, ದಿನಾಂಕ : 30-05-2013.

**ಪ್ರಸ್ತಾವನೆ :**

ಆಹಾರ ಪದಾರ್ಥಗಳ ತಯಾರಿಕೆ ದಾಸ್ತಾನು ಸಂಗ್ರಹ ಹಂಚಿಕೆ ಮಾರಾಟ ಮತ್ತು ಆಮದು ಇವುಗಳ ಸುರಕ್ಷತೆ ಮತ್ತು ಗುಣಮಟ್ಟಗಳನ್ನು ಕಾನೂನಿನ ಅಡಿಯಲ್ಲಿ ಕ್ರಮಬದ್ಧಗೊಳಿಸಲು ಕೇಂದ್ರ ಸರ್ಕಾರವು ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ 2006ನ್ನು ಜಾರಿಗೆ ತಂದಿರುತ್ತದೆ. ಈ ಕಾಯಿದೆಯ ಅನುಗುಣವಾಗಿ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ನಿಯಮಗಳು 2011 ನ್ನು ದಿನಾಂಕ : 5-8-2011 ರಿಂದ ರಾಜ್ಯಾದ್ಯಂತ ಜಾರಿಗೆ ತರಲಾಗಿದೆ.

ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು, 2011ರ ನಿಬಂಧನೆ 2.3.4ರ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನು ಒಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲ ಹಾಗೂ ಇತರೆ ಯಾವುದೇ ಹೆಸರಿನಲ್ಲಿ ಮಾರುಕಟ್ಟೆಯಲ್ಲಿ ಲಭ್ಯವಿರುವ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ತಯಾರಿಕೆ, ಸಂಗ್ರಹಣೆ, ಮಾರಾಟ ಹಾಗೂ ವಿತರಣೆಯನ್ನು ಸಾರ್ವಜನಿಕರ

ಆರೋಗ್ಯದ ಹಿತದೃಷ್ಟಿಯಿಂದ ಮೇಲೆ ಓದಲಾದ ಅಧಿಸೂಚನೆಯ ದಿನಾಂಕ : 30–05–2013ರ ಅಧಿಸೂಚನೆಯಲ್ಲಿ ಸಂಪೂರ್ಣವಾಗಿ ನಿಷೇಧಿಸಿ ಆಹಾರ ಸುರಕ್ಷತಾ ಆಯುಕ್ತರು ಆದೇಶಿಸಿದ್ದಾರೆ.

ಭಾರತ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದ ಹಿನ್ನೆಲೆಯಲ್ಲಿ ಗುಟ್ಕಾ ಮತ್ತು ಪಾನ್ ಮಸಾಲವನ್ನು ನಿಷೇಧಿಸಲಾಗಿರುವುದರಿಂದ ರಾಜ್ಯದಲ್ಲಿ ತಂಬಾಕು ಮತ್ತು ನಿಕೋಟಿನ್ ಮಿಶ್ರಿತ ಒಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲಗಳನ್ನು ನಿಷೇಧಿಸಿರುವ ಆದೇಶವನ್ನು ಸಂಪೂರ್ಣವಾಗಿ ಮತ್ತು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿ (District-level enforce committee) ಯನ್ನು ರಚಿಸುವ ಅವಶ್ಯಕತೆ ಇರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 156 ಸಿಜಿಇ 2012, ಬೆಂಗಳೂರು, ದಿನಾಂಕ : 04–07–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನು ಒಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲ ಹಾಗೂ ಇತರ ಯಾವುದೇ ಹೆಸರಿನಲ್ಲಿ ಮಾರುಕಟ್ಟೆಯಲ್ಲಿ ಲಭ್ಯವಿರುವ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ತಯಾರಿಕೆ, ಸಂಗ್ರಹಣೆ, ಮಾರಾಟ ಹಾಗೂ ವಿತರಣೆಯನ್ನು ಸಾರ್ವಜನಿಕರ ಆರೋಗ್ಯದ ಹಿತದೃಷ್ಟಿಯಿಂದ ಸಂಪೂರ್ಣವಾಗಿ ನಿಷೇಧಿಸಿರುವ ಆದೇಶವನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡ ಸದಸ್ಯರುಗಳನ್ನು ಒಳಗೊಂಡ ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿ (District level enforce committee) ಯನ್ನು ಸರ್ಕಾರ ರಚಿಸಿದೆ.

| | | |
|---|---|---|
| 1. | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯರು |
| 3. | ಜಿಲ್ಲಾ ಆರಕ್ಷಕ ಅಧೀಕ್ಷಕರು | ಸದಸ್ಯರು |
| 4. | ಆಯುಕ್ತರು/ಬೃಹತ್ ಮಹಾನಗರ ಪಾಲಿಕೆ/ಮಹಾನಗರ ಪಾಲಿಕೆ/ ನಗರ ಸಭೆ | ಸದಸ್ಯರು |
| 5. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | ಸದಸ್ಯರು |
| 6. | ವಾಣಿಜ್ಯ ತೆರಿಗೆ ಅಧಿಕಾರಿ | ಸದಸ್ಯರು |
| 7. | ಹಿರಿಯ ಪ್ರಾದೇಶಿಕ ಸಾರಿಗೆ ಅಧಿಕಾರಿ | ಸದಸ್ಯರು |
| 8. | ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು | ಸದಸ್ಯರು |
| 9. | ಉಪ ನಿರ್ದೇಶಕರು, ವಾರ್ತಾ ಇಲಾಖೆ | ಸದಸ್ಯರು |
| 10. | ಉಪ ನಿರ್ದೇಶಕರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ | ಸದಸ್ಯರು |
| 11. | ಜಿಲ್ಲಾ ಅಂಕಿತ ಅಧಿಕಾರಿ, ಆಹಾರ ಸುರಕ್ಷತೆ ಮತ್ತು ಗುಟಮಟ್ಟ ಕಾಯ್ದೆ | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯು ಕೆಳಕಂಡಂತೆ ಕ್ರಮಕೈಗೊಳ್ಳುವುದು :

1. ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನು ಒಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲ ಹಾಗೂ ಇತರೆ ಯಾವುದೇ ಹೆಸರಿನಲ್ಲಿ ಮಾರುಕಟ್ಟೆಯಲ್ಲಿ ಲಭ್ಯವಿರುವ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ತಯಾರಿಕೆ, ಸಂಗ್ರಹಣೆ ಮಾರಾಟ ಹಾಗೂ ವಿತರಣೆಯಲ್ಲಿ ತೊಡಗಿರುವ ವ್ಯಾಪಾರಸ್ಥರುಗಳಿಗೆ ಸೂಕ್ತವಾಗಿ ಎಚ್ಚರಿಕೆಯನ್ನು ಒಳಗೊಂಡ ತಿಳುವಳಿಕೆ ನೀಡುವುದು.

2. ಈ ನಿಷೇಧಿತ ಪದಾರ್ಥಗಳ ತಯಾರಿಕೆ, ಸಂಗ್ರಹಣೆ ಮತ್ತು ಮಾರಾಟ ಮಾಡುವ ವ್ಯಕ್ತಿಗಳ ವಿರುದ್ಧ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯ 2006ರ ಕಲಂ 57, 58 ಮತ್ತು 59 ರಡಿಯಲ್ಲಿ ಕ್ರಮ ಜರುಗಿಸುವುದು. ಕಲಂ 59ರ ಉಪ ಕಲಂಗಳನ್ವಯ ಈ ನಿಯಮಗಳನ್ನು ಉಲ್ಲಂಘಿಸಿರುವವರಿಗೆ ಗರಿಷ್ಠ ರೂ. 10 ಲಕ್ಷದ ವರೆಗೆ ದಂಡ ವಿಧಿಸಬಹುದಾಗಿದ್ದು, ಗರಿಷ್ಠ ಸೆರೆವಾಸದ ದಂಡನೆಯನ್ನು ವಿಧಿಸಲು ಅವಕಾಶವಿರುವ ಅಂಶವನ್ನು ವ್ಯಾಪಕವಾಗಿ ಪ್ರಚಾರ ಪಡಿಸತಕ್ಕದ್ದು.

3. ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನು ಒಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲ ಇವು ಅನಾರೋಗ್ಯಕರವಾದ ಆಹಾರ ಪದಾರ್ಥಗಳಾಗಿರುತ್ತವೆ. ಈ ರೀತಿ ಅನಾರೋಗ್ಯಕರ ಆಹಾರ ಪದಾರ್ಥ ಅಥವಾ ಪಾನಿಯಗಳನ್ನು ಮಾರಾಟ ಮಾಡುವುದು ಐಪಿಸಿ ಸೆಕ್ಷನ್ 273ರ ಪ್ರಕಾರ ಅಪರಾಧವಾಗಿದೆ. ಈ ರೀತಿ ಅನಾರೋಗ್ಯ ಆಹಾರ ಪದಾರ್ಥಗಳನ್ನು ಮಾರಾಟ ಮಾಡುವವರ ವಿರುದ್ಧ ಇದೇ ಸೆಕ್ಷನ್ ಯಡಿ ಮೊಕದ್ದಮೆ ದಾಖಲಿಸಬಹುದಾಗಿದ್ದು ಈ ಅಪರಾಧಕ್ಕೆ 6 ತಿಂಗಳ ವರೆಗೆ ಜೈಲು ಶಿಕ್ಷೆ ಅಥವಾ ಒಂದು ಸಾವಿರದ ವರೆಗೆ ದಂಡನೆ ಅಥವಾ ಜೈಲು ಶಿಕ್ಷೆ ಹಾಗೂ ದಂಡನೆ ಹಾಗೂ ಜೈಲು ಶಿಕ್ಷೆ ಇವೆರಡನ್ನು ಸಹ ವಿಧಿಸಲು ಅವಕಾಶ ಕಲ್ಪಿಸಿದೆ. ಅನಾರೋಗ್ಯಕರವಾದ ಗುಟ್ಕಾ ಮತ್ತು ಪಾನ್ ಮಸಾಲಗಳನ್ನು ಮಾರಾಟ ಮಾಡುವವರ ವಿರುದ್ಧ ಈ ಸೆಕ್ಷನ್ ಅಡಿಯಲ್ಲಿ ಮೊಕದ್ದಮೆ ಹೂಡುವ ಕುರಿತು ಕ್ರಮತೆಗೆದುಕೊಳ್ಳುವುದು.

4. ತಂಬಾಕು ಮತ್ತು ನಿಕೋಟಿನ್ ಪದಾರ್ಥಗಳನ್ನು ಒಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲಗಳನ್ನು ರಾಜ್ಯದಲ್ಲಿ ತಯಾರಿಸಲು, ಸಂಗ್ರಹಿಸಲು ಮತ್ತು ಮಾರಾಟ ಮಾಡಲು ದಿನಾಂಕ : 30–05–2013 ರಂದು ನಿಷೇಧಿಸಿ ಆದೇಶ ಹೊರಡಿಸಿದೆ. ಈ ರೀತಿ ಸರ್ಕಾರದಿಂದ ನಿಷೇಧಿಸಿದ ಆದೇಶವನ್ನು ಉಲ್ಲಂಘಿಸಿದವರ ವಿರುದ್ಧ ಐಪಿಸಿ ಸೆಕ್ಷನ್ 188ರ ಅನ್ವಯ ಮೊಕದ್ದಮೆ ದಾಖಲಿಸಬಹುದು ಈ ರೀತಿ ಅಪರಾಧಕ್ಕೆ 1 ತಿಂಗಳವರೆಗೆ ಜೈಲು ಶಿಕ್ಷೆ ಅಥವಾ ಜೊತೆಗೆ ರೂ. 200 ದಂಡನೆ ಹಾಗೂ ಜೈಲು ಶಿಕ್ಷೆ ಹಾಗೂ ದಂಡವನ್ನು ಎರಡನ್ನು ಸಹ ವಿಧಿಸಲು ಅವಕಾಶ ಕಲ್ಪಿಸಿದೆ. ಸಾರ್ವಜನಿಕರ ಜೀವನ ಅಥವಾ ಆರೋಗ್ಯಕ್ಕೆ ತೊಂದರೆ ಉಂಟು ಮಾಡಿದ್ದಲ್ಲಿ ಅವರಿಗೆ 6 ತಿಂಗಳು ಜೈಲು ಶಿಕ್ಷೆ

ಅಥವಾ ಜೊತೆಗೆ ಒಂದು ಸಾವಿರ ದಂಡನೆ ಮತ್ತು ಜೈಲು ಶಿಕ್ಷೆ ಹಾಗೂ ದಂಡವನ್ನು ವಿಧಿಸಬಹುದಾಗಿದೆ. ಈ ಆದೇಶವನ್ನು ಉಲ್ಲಂಘಿಸಿದವರ ವಿರುದ್ಧ ಈ ಸೆಕ್ಷನ್ ಅನ್ವಯ ಮೊಕದ್ದಮೆ ಹೂಡುವ ಬಗ್ಗೆ ಕ್ರಮತೆಗೆದುಕೊಳ್ಳುವುದು.

5. ಗುಟ್ಕಾ ಮತ್ತು ಪಾನ್ ಮಸಾಲ ತಯಾರಿಸುವ ಮತ್ತು ಸಂಗ್ರಹಿಸುವವರ ವಿವರಗಳನ್ನು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಿಂದ ಪಡೆದು ಜಿಲ್ಲಾ ಆರಕ್ಷಕ ಅಧಿಕಾರಿ ಮತ್ತು ಅಂಕಿತಾಧಿಕಾರಿಗಳಿಗೆ ಸಲ್ಲಿಸುವುದು.

6. ದಾಳಿ ಮಾಡಿ ವಶಪಡಿಸಿಕೊಂಡ ಗುಟ್ಕಾ ಮತ್ತು ಪಾನ್ ಮಸಾಲಗಳನ್ನು ಪರಿಸರಕ್ಕೆ ಧಕ್ಕೆಯಾಗದ ರೀತಿಯಲ್ಲಿ ವಿಲೇರಿಮಾಡುವುದು.

7. ಗುಟ್ಕಾ ಮತ್ತು ಪಾನ್ ಮಸಾಲದಲ್ಲಿ ತಂಬಾಕು ಮತ್ತು ನಿಕೋಟಿನ್ ಒಳಗೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಲ್ಲಿ ಅಂತಹ ಪದಾರ್ಥಗಳನ್ನು ಪರೀಕ್ಷೆಗೆ ಒಳಪಡಿಸುವ ಬಗ್ಗೆ ಕ್ರಮತೆಗೆದುಕೊಳ್ಳುವುದು.

COTPA ಕಾಯ್ದೆಯಡಿ ಸರ್ಕಾರಕ್ಕೆ ಸಲ್ಲಿಸುತ್ತಿರುವ ಮಾಸಿಕ ವರದಿಯಲ್ಲಿ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ನಿಷೇಧ ಕುರಿತು ತೆಗೆದುಕೊಂಡ ಕ್ರಮವನ್ನು ಸಹ ಅಂದರೆ ಗುಟ್ಕಾ ತಯಾರಿಕಾ ಘಟಕ ಮತ್ತು ಮಾರಾಟ ಅಂಗಡಿಗಳ ಮೇಲೆ ನಡೆಸಿದ ದಾಳಿಯ ಪ್ರಕರಣಗಳ ಸಂಖ್ಯೆ ಸಂಗ್ರಹಿಸಿ ದಂಡ ಹಾಗೂ ವಶಪಡಿಸಿಕೊಳ್ಳಲಾದ ಪದಾರ್ಥಗಳ ವಿವರಗಳನ್ನೊಳಗೊಂಡ ಮಾಹಿತಿಯನ್ನು ನಿಗಧಿತ ನಮೂನೆಯಲ್ಲಿ ಅಳವಡಿಸಿ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ನಗರಾಭಿವೃದ್ಧಿ ಇಲಾಖೆ ಮತ್ತು ಪೊಲೀಸ್ ಮಹಾನಿರ್ದೇಶಕರು ಇವರುಗಳಿಗೆ ಕಾಲಕಾಲಕ್ಕೆ ಸಲ್ಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 776

**ಪಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ಆರೋಗ್ಯ 1 ಮತ್ತು 2).

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಬಿ.ಹೆಚ್. ಶ್ರೀಹರ್ಷ, ನೋಟರಿ, ಚಿಕ್ಕಮಗಳೂರು ಕಂದಾಯ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರ ಸಂಖ್ಯೆ : 9102/2012, ದಿನಾಂಕ : 27-11-2012.
2. ಸರ್ಕಾರದ ಪತ್ರ ಸಂಖ್ಯೆ : ಲಾ 195 ಎಲ್‌ಸಿಎಲ್ 2012 (ಭಾ), ದಿನಾಂಕ : 19-04-2013.
3. ನೋಟರಿಯವರ ಲಿಖಿತ ಹೇಳಿಕೆ ದಿನಾಂಕ : 02-05-2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 27-11-2012 ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು ಜಿಲ್ಲೆ ಇವರು ಸರ್ಕಾರಕ್ಕೆ ಪತ್ರ ಬರೆದು ಶ್ರೀ ಬಿ.ಹೆಚ್. ಹರ್ಷ, ನೋಟರಿ ಇವರು ಮೇ 2011 ರಿಂದ ನೋಟರಿ ಕೆಲಸ ನಿರ್ವಹಿಸುತ್ತಿಲ್ಲವೆಂದೂ, ಸದರಿ ನೋಟರಿಯವರು ಗ್ರಾಹಕರ ಪರಿಹಾರ ವೇದಿಕೆ, ಧಾರವಾಡ ಜಿಲ್ಲೆ ಇಲ್ಲಿಗೆ ಅಧ್ಯಕ್ಷರಾಗಿ ನೇಮಕಗೊಂಡು ಚಿಕ್ಕಮಗಳೂರು ಜಿಲ್ಲೆಯಿಂದ ಧಾರವಾಡ ಜಿಲ್ಲೆಗೆ ಹೋಗಿರುವುದರಿಂದ, ಈ ಬಗ್ಗೆ ಕಛೇರಿಗೆ ತಿಳಿಸಿರುವುದಿಲ್ಲವೆಂದೂ ಹಾಗೂ ನೋಟರಿ ಕರ್ತವ್ಯಕ್ಕೆ ರಾಜೀನಾಮೆಯನ್ನು ಸಹ ನೀಡಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಅದರಂತೆ, ಓದಲಾದ (2)ರ ಸರ್ಕಾರದ ಪತ್ರ ದಿನಾಂಕ : 19-4-2013ರಲ್ಲಿ ಸದರಿ ನೋಟರಿಯವರಿಗೆ ತಮ್ಮ ನೋಟರಿ ಹುದ್ದೆಗೆ ರಾಜೀನಾಮೆಯನ್ನು ನೀಡುವಂತೆ ತಿಳಿಸಲಾಗಿತ್ತು.

ಓದಲಾದ (3)ರ ದಿನಾಂಕ : 02-05-2013 ರಲ್ಲಿ ಸದರಿ ನೋಟರಿಯವರು ಸರ್ಕಾರಕ್ಕೆ ತಮ್ಮ ಲಿಖಿತ ಹೇಳಿಕೆಯನ್ನು ನೀಡಿದ್ದು, ಸರ್ಕಾರದೊಂದಿಗೆ ವ್ಯವಹರಿಸಬೇಕಾದ ಶಿಷ್ಟಾಚಾರದ ಉಲ್ಲಂಘನೆಯಾಗಿದೆ. ಸದರಿ ನೋಟರಿಯವರು ಹಾಗೂ ಪ್ರಸ್ತುತ ಜಿಲ್ಲಾ ಗ್ರಾಹಕರ ವೇದಿಕೆಯ ಅಧ್ಯಕ್ಷರು ಅವರ ಪತ್ರದಲ್ಲಿ ನೋಟರಿಯಾಗಿ ನೇಮಕವಾದವರೆಲ್ಲಾ ನೋಟರಿ ಸೇವೆಯನ್ನು ಕಡ್ಡಾಯಪೂರ್ವಕವಾಗಿ ನಿರ್ವಹಿಸಬೇಕಾಗಿರುವುದಿಲ್ಲ ಹಾಗೂ ಕಡ್ಡಾಯ ಪೂರ್ವಕವಾಗಿ ಸೇವೆಯನ್ನು ನಿರ್ವಹಿಸುವಂತೆ ಆದೇಶಿಸುವಂತೆಯೂ ಇಲ್ಲವೆಂದು ವಾದಿಸುತ್ತಾ, ನೋಟರಿ ಸೇವೆಗೆ ನೇಮಿಸಲ್ಪಟ್ಟವರು ರಾಜೀನಾಮೆ ಕೊಡುವ ಸಂದರ್ಭವೂ ಇಲ್ಲವೆಂದೂ, ನೋಟರಿ ಕಾಯ್ದೆಯಲ್ಲಿ ಅಂತಹ ರಾಜೀನಾಮೆ ಸಲ್ಲಿಸುವ ಕಾಯ್ದೆಯಾಗಲಿ ರೂಲ್‌ಗಳಾಗಲಿ ಇರುವುದಿಲ್ಲವೆಂದೂ, ನೋಟರಿ ಸೇವೆಗೆ ನೇಮಿಸಲ್ಪಟ್ಟವರು, ಕರ್ತವ್ಯಚ್ಯುತಿಯನ್ನು ಎಸಗಿದಾಗ ಅವರನ್ನು ಆಯ್ಕೆ ಸಮಿತಿಯು ವಜಾಗೊಳಿಸಬಹುದಾಗಿದೆ ಎಂದೂ, ಸದರಿ ನೋಟರಿಯವರು ಯಾವುದೇ ಕಾರ್ಯಚ್ಯುತಿ ಎಸಗಿರುವುದಿಲ್ಲ ಹಾಗೂ ಬೇರೆಯವರ ನೇಮಕಾತಿಗಾಗಿ ನನ್ನ ನೇಮಕಾತಿಯ ಬಾಬ್ತು ರಾಜೀನಾಮೆ ಸಲ್ಲಿಸುವ ಅಗತ್ಯವಿಲ್ಲವೆಂಬ ತೀರ್ಮಾನಕ್ಕೆ ಬಂದಿರುತ್ತಾರೆ.

ನೋಟರಿ ನೇಮಕಾತಿಯನ್ನು ಕಂದಾಯ ತಾಲ್ಲೂಕು ಸಾರ್ವಜನಿಕರ ಹಿತಾಸಕ್ತಿಯನ್ನು/ಅವಶ್ಯಕತೆಯನ್ನು ಗಮನದಲ್ಲಿಟ್ಟು ಮಾಡಲಾಗುತ್ತದೆ. ಆದ್ದರಿಂದ, ನೋಟರಿ ಕರ್ತವ್ಯವನ್ನು ನಿರ್ವಹಿಸುವುದನ್ನು ನಿಲ್ಲಿಸಿ ಬೇರೆ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುವುದು ಸಹ ಕರ್ತವ್ಯಚ್ಯುತಿಯಾಗುತ್ತದೆ. 5 ವರ್ಷಗಳ ಕಾಲ ನೋಟರಿ ಕರ್ತವ್ಯ ನಿರ್ವಹಿಸದೆ ಇರುವುದಕ್ಕೆ ಅನುಮತಿ ನೀಡುವುದು ಸಾರ್ವಜನಿಕ ಹಿತಾಸಕ್ತಿಗೆ ಧಕ್ಕೆಯಾಗುವ ಕ್ರಮವಾಗುತ್ತದೆ ಹಾಗೂ 1952ರ ನೋಟರಿ ಕಾಯ್ದೆ ಮತ್ತು 1956ರ ನೋಟರಿ ನಿಯಮಗಳಲ್ಲಿ ನೋಟರಿ ನೇಮಕಾತಿ ಆದೇಶವನ್ನು ಸುಪ್ತವಾಗಿಡಲು ಅವಕಾಶವಿರುವುದಿಲ್ಲ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 195 ಎಲ್‌ಸಿಎಲ್ 2012(ಭಾ), ಬೆಂಗಳೂರು, ದಿನಾಂಕ : 10-07-2013.**

ಶ್ರೀ ಬಿ.ಹೆಚ್. ಶ್ರೀಹರ್ಷ, ನೋಟರಿ, ಚಿಕ್ಕಮಗಳೂರು ಕಂದಾಯ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದು ರುಜುವಾತಾದ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12) (ಬಿ) (1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 787 **ಟಿ.ಕೆ. ಲಕ್ಷ್ಮಿನರಸಯ್ಯ**

SC-15 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2) (ಪ್ರಭಾರ),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎಂ. ಬಲರಾಮರಾಜು, ನೋಟರಿ, ಕುಣಿಗಲ್ ಕಂದಾಯ ತಾಲ್ಲೂಕು, ತುಮಕೂರು ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸಿ ಅವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ :**

1. ನೋಟರಿಯವರ ಮನವಿ ದಿನಾಂಕ : 14-05-2013.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುಮಕೂರು ಇವರ ಪತ್ರ ಸಂಖ್ಯೆ : ಜಿ.ಟಿ.ನಂ. 673/2013, ದಿನಾಂಕ : 17-05-2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 14-05-2013 ರಂದು ಶ್ರೀ ಹೆಚ್.ಎಂ. ಬಲರಾಮರಾಜು, ನೋಟರಿ, ಕುಣಿಗಲ್ ಕಂದಾಯ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುಮಕೂರು ಜಿಲ್ಲೆ ಇವರಿಗೆ ಮನವಿಯನ್ನು ಸಲ್ಲಿಸಿ, ಸರ್ಕಾರದ ಪತ್ರ ಸಂಖ್ಯೆ : ಲಾ 139 ಎಲ್‌ಎಜಿ 2012 ರಲ್ಲಿ, ಅವರು ಸಹಾಯಕ ಸರ್ಕಾರಿ ವಕೀಲರಾಗಿ ನೇಮಕಗೊಂಡಿರುವುದರಿಂದ, ನೋಟರಿ ಹುದ್ದೆಗೆ ರಾಜೀನಾಮೆಯನ್ನು ಸಲ್ಲಿಸಿ ಅಂಗೀಕರಿಸುವಂತೆ ಕೋರಿರುತ್ತಾರೆ.

ಅದರಂತೆ, ಓದಲಾದ (2)ರ ದಿನಾಂಕ : 17-05-2013 ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುಮಕೂರು ಜಿಲ್ಲೆ ಇವರು ಸದರಿ ನೋಟರಿಯವರು ರಾಜೀನಾಮೆಯನ್ನು ಸರ್ಕಾರಕ್ಕೆ ರವಾನಿಸಿರುತ್ತಾರೆ

ಸರ್ಕಾರವು ನೋಟರಿಯವರ ಮನವಿಯನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 106 ಎಲ್‌ಸಿಎಲ್ 2013, ಬೆಂಗಳೂರು, ದಿನಾಂಕ : 06-07-2013.**

ಶ್ರೀ ಹೆಚ್.ಎಂ. ಬಲರಾಮರಾಜು, ನೋಟರಿ, ಕುಣಿಗಲ್ ಕಂದಾಯ ತಾಲ್ಲೂಕು, ತುಮಕೂರು ಜಿಲ್ಲೆ ಇವರ ನೋಟರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ : 14-05-2013 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ ಮತ್ತು ಸದರಿಯವರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ 10(ಎ) ರೀತ್ಯಾ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 796 **ಟಿ.ಕೆ. ಲಕ್ಷ್ಮಿನರಸಯ್ಯ**

SC-15 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2) (ಪ್ರಭಾರ),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎಸ್. ಸತ್ಯನಾರಾಯಣಶೆಟ್ಟಿ, ನೋಟರಿ, ಚಿತ್ರದುರ್ಗ ಜಿಲ್ಲೆ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದುಹಾಕುವ ಬಗ್ಗೆ ಹಾಗೂ ಶಾಶ್ವತವಾಗಿ ಅವರನ್ನು ನೋಟರಿಯಾಗಿ ನೇಮಕಾತಿಯಾಗದಂತೆ ತಡೆಯುವ ಬಗ್ಗೆ ಆದೇಶ.

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರ ಪತ್ರ ದಿನಾಂಕ : 16-09-2011.
2. ಸರ್ಕಾರದ ಪತ್ರ ಸಂಖ್ಯೆ : ಲಾ 283 ಎಲ್‌ಸಿಎಲ್ 2011, ದಿನಾಂಕ : 15-10-2011.
3. ಶ್ರೀ ಹೆಚ್.ಎಸ್. ಸತ್ಯನಾರಾಯಣಶೆಟ್ಟಿ ಇವರ ದಿನಾಂಕ : 02-11-2011ರ ಲಿಖಿತ ಹೇಳಿಕೆ.
4. ಸರ್ಕಾರದ ಪತ್ರ ಸಂಖ್ಯೆ : ಲಾ 283 ಎಲ್‌ಸಿಎಲ್ 2011, ದಿನಾಂಕ : 22-12-2011.
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರ ದಿನಾಂಕ : 16-01-2013ರ ಪತ್ರ.

**ಪ್ರಸ್ತಾವನೆ :**

ಚಿತ್ರದುರ್ಗದ ಪ್ಯಾರೇಜಾನ್ ಎಂಬುವವರು ಚಿತ್ರದುರ್ಗ ತಾಲ್ಲೂಕು ಕಸಬಾ ಹೋಬಳಿ, ಕೆಳಗೋಟೆ ಗ್ರಾಮದ ಸರ್ವೆ ಸಂಖ್ಯೆ 26/2 ಎಪಿ ಮತ್ತು ರೀ ಸರ್ವೆ ಸಂಖ್ಯೆ : 139/2ಬಿಪಿ ಎಂಬ ಜಮೀನಿಗೆ ಸಂಬಂಧಪಟ್ಟಂತೆ ದಿನಾಂಕ : 25-06-2011 ರಂದು ಅವರ ಮಗ ಭಾಷಾ ಎಂಬುವವರಿಗೆ ಒಂದು ಜನರಲ್ ಪವರ್ ಆಫ್ ಅಟಾರ್ನಿಯನ್ನು ಬರೆದು ಕೊಟ್ಟಿದ್ದಾರೆ. ಆದರೆ, ದಿನಾಂಕ : 25-06-2011 ರಂದು ಪ್ಯಾರೇಜಾನ್ ಎಂಬ ವ್ಯಕ್ತಿ ಜೀವಂತ ಇರಲಿಲ್ಲ. ಅವರು ದಿನಾಂಕ : 12-06-2011 ರಂದು ಮೃತ ಪಟ್ಟಿದ್ದರು. ಹಾಗಾಗಿ, ಪ್ಯಾರೇಜಾನ್‌ರವರ ಹೆಸರಿನಲ್ಲಿ ಮತ್ತೊಬ್ಬ ವ್ಯಕ್ತಿ ದಿನಾಂಕ : 25-06-2011 ರಂದು ಪವರ್ ಆಫ್ ಅಟಾರ್ನಿಯನ್ನು ನೋಟರಿಯವರ ಮುಂದೆ ಜಾರಿಗೊಳಿಸಿರುತ್ತಾರೆ. ಪವರ್ ಆಫ್ ಅಟಾರ್ನಿಯಲ್ಲಿರುವುದು ಪ್ಯಾರೇಜಾನ್‌ರವರ ನೈಜ ಸಹಿಯಲ್ಲ. ಅದು ಖೋಟಾ ಸಹಿ ಇರುತ್ತದೆ. ಪ್ಯಾರೇಜಾನ್ ಎಂಬ ವ್ಯಕ್ತಿ ನೋಟರಿಯವರ ಮುಂದೆ ಹಾಜರಾಗಿರುವುದೇ ಇಲ್ಲ. ಪವರ್ ಆಫ್

ಅಟಾರ್ನಿಯನ್ನು ಜಾರಿಗೊಳಿಸಲ್ಪಡಬೇಕಿದ್ದರೆ 200 ರೂಪಾಯಿಗಳ ಮುದ್ರಾಂಕ ಶುಲ್ಕ ಪಾವತಿ ಮಾಡಬೇಕು. ಆದರೆ, ಪವರ್ ಆಫ್ ಅಟಾರ್ನಿಯನ್ನು 2.00 (ಎರಡು) ರೂಪಾಯಿ ಮೌಲ್ಯದ ದಾಸ್ತಾವೇಜು ಹಾಳೆಯ ಮೇಲೆ ಬರೆಯಲಾಗಿದೆ. ನೋಟರಿಯವರು ಜನರಲ್ ಪವರ್ ಆಫ್ ಅಟಾರ್ನಿಗೆ ಕಾನೂನಿನ ಪ್ರಕಾರ ಪಾವತಿ ಮಾಡಬೇಕಾದ ಮುದ್ರಾಂಕ ಪವರ್ ಆಫ್ ಅಟಾರ್ನಿಯ ಮೇಲೆ ನೋಟರಿ ರಿಜಿಸ್ಟರ್‌ನ ಸಂಖ್ಯೆಯನ್ನು ಬರೆದಿರುವುದಿಲ್ಲ. ಹಾಗೆಯೇ ನೋಟರಿಯವರು ಕೊಡುವ ರಶೀದಿ ಸಂಖ್ಯೆಯನ್ನು ಸಹ ಬರೆದಿರುವುದಿಲ್ಲ. ಆದುದರಿಂದ, ನಿಯಮಗಳನ್ನು ಉಲ್ಲಂಘಿಸಿ ನೋಟರಿಯವರು ಜೀವಂತ ಇರದೇ ಇದ್ದ ವ್ಯಕ್ತಿಯ ಪವರ್ ಆಫ್ ಅಟಾರ್ನಿಯನ್ನು ಅವರ ಮುಂದೆ ಜಾರಿಗೊಳಿಸಿ ಅಪರಾಧ ಎಸಗಿದ್ದಾರೆ. ಈ ರೀತಿಯ ಪವರ್ ಆಫ್ ಅಟಾರ್ನಿಯಿಂದ ತಮ್ಮ ಹಿತಾಸಕ್ತಿಗೆ ಧಕ್ಕೆಯಾಗಿದೆ ಎಂದು ದೂರುದಾರರು ಆರೋಪಿಸಿದ್ದಾರೆ.

2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಓದಲಾದ (1) ರ ದಿನಾಂಕ : 16–09–2011ರ ಪತ್ರದಲ್ಲಿ ಶ್ರೀ ಹೆಚ್.ಎಸ್. ಸತ್ಯನಾರಾಯಣಶೆಟ್ಟಿ, ನೋಟರಿ ಇವರ ವಿರುದ್ಧ ಶ್ರೀ ಎಸ್. ಮುಸಾವಿರ್ ಅಹಮದ್ ಮತ್ತು ಶ್ರೀ ಅಬ್ದುಲ್ ಜಬ್ಬಾರ್ ಇವರುಗಳು ಸಲ್ಲಿಸಿರುವ ದೂರನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಓದಲಾದ (2)ರ ಸರ್ಕಾರದ ಪತ್ರ ದಿನಾಂಕ : 15–10–2011 ರಲ್ಲಿ ನೋಟರಿಯವರನ್ನು, ಸದರಿ ದೂರಿನ ಕುರಿತು ಲಿಖಿತ ಹೇಳಿಕೆಯನ್ನು ಕೋರಲಾಗಿತ್ತು. ಅದರಂತೆ, ಓದಲಾದ (3)ರ ದಿನಾಂಕ : 02–11–2011 ರಲ್ಲಿ ನೋಟರಿಯವರು ತಮ್ಮ ತಕರಾರು ಪತ್ರವನ್ನು ಸಲ್ಲಿಸಿ, ತಾವು ಚಿತ್ರದುರ್ಗ ನಗರದಲ್ಲಿ 1975ನೇ ಇಸವಿಯಿಂದ ವಕೀಲ ವೃತ್ತಿಯಲ್ಲಿ ಇರುವುದಾಗಿಯೂ ಮತ್ತು 1994–95ನೇ ಸಾಲಿನಲ್ಲಿ ನೋಟರಿಯಾಗಿ ನೇಮಕವಾದ ನಂತರ ಈವರೆವಿಗೂ ಯಾವುದೇ ರೀತಿಯ ದೂರುಗಳಿಗೆ ಆಸ್ಪದ ಕೊಡದೆ ಕಕ್ಷಿದಾರರ ಮತ್ತು ವಕೀಲರ ವಿಶ್ವಾಸ ಗಳಿಸಿ ನಿಷ್ಠೆಯಿಂದ ಮತ್ತು ಬದ್ಧತೆಯಿಂದ ಕಾರ್ಯ ನಿರ್ವಹಿಸುತ್ತಿರುವುದಾಗಿ ತಿಳಿಸಿರುತ್ತಾರೆ. ದೂರುದಾರರು ತಮ್ಮ ವಿರುದ್ಧ ಮಾಡಿರುವ ಆಪಾದನೆಗಳು ನಿರಾಧಾರವೆಂದು, ದೂರನ್ನು ನೋಟರಿ ಕಾಯಿದೆ ಮತ್ತು ನಿಯಮಾವಳಿಗಳ ಅನುಸಾರ ನಿಗಧಿತ ನಮೂನೆಯಲ್ಲಿ ಸಲ್ಲಿಸದೇ ಇರುವುದರಿಂದ, ಆ ದೂರನ್ನು ಆರಂಭದಲ್ಲಿಯೇ ಯಾವುದೇ ರೀತಿಯ ವಿಚಾರಣೆಯ ಅಗತ್ಯವಿಲ್ಲದೆ ತಿರಸ್ಕರಿಸುವುದು ಯೋಗ್ಯವೆಂದು ತಿಳಿಸಿರುತ್ತಾರೆ.

3. ಪ್ರಶ್ನಿತ ಜನರಲ್ ಪವರ್ ಆಫ್ ಅಟಾರ್ನಿಯನ್ನು ಪ್ಯಾರೇಜಾನ್ ಎಂಬುವವರು ದಿನಾಂಕ : 25–06–2011 ರಂದು ತನ್ನ ಮುಂದೆ ಜಾರಿಗೊಳಿಸಿದರೆಂಬುದನ್ನು ಸ್ಪಷ್ಟವಾಗಿ ಆಕ್ಷೇಪಣಾ ಹೇಳಿಕೆಯಲ್ಲಿ ನೋಟರಿಯವರು ಅಲ್ಲಗಳೆದಿರುತ್ತಾರೆ. ಸದರಿ ಜನರಲ್ ಪವರ್ ಆಫ್ ಅಟಾರ್ನಿಯನ್ನು ಪ್ಯಾರೇಜಾನ್‌ರವರು ದಿನಾಂಕ : 25–06–2011 ರಂದು ಜಾರಿಗೊಳಿಸಿದುದಾಗಿಯೂ, ಆ ಪವರ್ ಆಫ್ ಅಟಾರ್ನಿಯನ್ನು ಬರೆದುಕೊಟ್ಟ ಪ್ಯಾರೇಜಾನ್‌ರವರನ್ನು ವಕೀಲರಾದ ಶ್ರೀ ಮೊಹಮದ್ ಸಮೀವುಲ್ಲಾರವರು ಗುರುತಿಸಿ ಸಹಿ ಮಾಡಿದ್ದರಿಂದ ತಾವು ಆ ನೋಟರಿ ದಾಖಲೆಯನ್ನು ಅನುಪ್ರಮಾಣಿಸಿದುದಾಗಿ ತಿಳಿಸಿರುತ್ತಾರೆ. ಜನರಲ್ ಪವರ್ ಆಫ್ ಅಟಾರ್ನಿಯ ದಸ್ತಾವೇಜಿನಲ್ಲಿ ಎರಡು ಜಾಗಗಳಲ್ಲಿ ದಿನಾಂಕವನ್ನು 25–2–11 ಎಂದು ಸ್ಪಷ್ಟವಾಗಿ ಬರೆಯಲಾಗಿದೆ. ಆದರೆ, ಒಂದು ಜಾಗದಲ್ಲಿ ದಿನಾಂಕವನ್ನು ನಮೂದಿಸುವಾಗ ತಪ್ಪಾಗಿ ತಿಂಗಳ ಹೆಸರನ್ನು ಬರೆದಿದ್ದನ್ನು ಗಮನಿಸಿ ಅದನ್ನು ತಿದ್ದುಪಡಿ ಮಾಡಲಾಗಿದೆ. ಹಾಗಾಗಿ ಪ್ರಶ್ನಿತ ಜನರಲ್ ಪವರ್ ಆಫ್ ಅಟಾರ್ನಿ ದಿನಾಂಕ : 25–02–2011 ರಂದು ಪ್ಯಾರೇಜಾನ್ ಬದುಕಿದ್ದಾಗ ಜಾರಿಗೊಳಿಸಲ್ಪಟ್ಟ ದಾಖಲೆಯೆಂದು, ಈ ದಾಖಲೆಯನ್ನು ಅನುಪ್ರಮಾಣಿಸುವಲ್ಲಿ ಯಾವುದೇ ರೀತಿಯ ತಪ್ಪನ್ನು ಎಸಗಿಲ್ಲವೆಂದು ತಿಳಿಸಿರುತ್ತಾರೆ. ಆದರೆ, ಜನರಲ್ ಪವರ್ ಆಫ್ ಅಟಾರ್ನಿಯ ಮೇಲೆ ತಾನು ನೋಟರಿಯಾಗಿ ಅನುಪ್ರಮಾಣಿಸಿದ ನಂತರ ಅದರ ಜೆರಾಕ್ಸ್ ಪ್ರತಿಯನ್ನು ತೆಗೆದುಕೊಂಡು ಹೋದರು. ಹಾಗಾಗಿ ತಾನು ತನ್ನ ಕೆಲಸ ಕಾರ್ಯಗಳಲ್ಲಿ ಮಗ್ನನಾಗಿದ್ದರಿಂದ ಪವರ್ ಆಫ್ ಅಟಾರ್ನಿಯನ್ನು ತನ್ನ ಮುಂದೆ ಜಾರಿಗೊಳಿಸಿದ ಬಗ್ಗೆ ನೋಟರಿ ರಿಜಿಸ್ಟರ್‌ನಲ್ಲಿ ನಮೂದು ಮಾಡುವುದು ಬಿಟ್ಟು ಹೋಯಿತೆಂದು ತಿಳಿಸಿರುತ್ತಾರೆ. ಈ ರೀತಿ ನೋಟರಿ ರಿಜಿಸ್ಟರ್‌ನಲ್ಲಿ ನಮೂದು ಮಾಡದಿರುವುದು ಅಚಾತುರ್ಯದಿಂದ ಆದ ತಪ್ಪು. ಅದರಲ್ಲಿ ಯಾವುದೇ ರೀತಿಯ ದುರುದ್ದೇಶವಿಲ್ಲವೆಂದೂ, ಇನ್ನು ಮುಂದೆ ಈ ರೀತಿ ತಪ್ಪು ಆಗದಂತೆ ಎಲ್ಲಾ ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಳ್ಳುವುದಾಗಿಯೂ, ದಿನಾಂಕ : 12–06–2011 ರಂದು ಪ್ಯಾರೇಜಾನ್‌ರವರು ನಿಧನರಾದ ವಿಷಯ ಗೊತ್ತಿರಲಿಲ್ಲವೆಂದು ತಿಳಿಸಿರುತ್ತಾರೆ. ತನ್ನ ಮುಂದೆ ಪ್ಯಾರೇಜಾನ್ ಎಂಬ ವ್ಯಕ್ತಿ ಬಂದೇ ಇರಲಿಲ್ಲ ಮತ್ತು ಪವರ್ ಆಫ್ ಅಟಾರ್ನಿಯ ಮೇಲೆ ಸಹಿ ಮಾಡಲಿಲ್ಲ ಎಂಬುದನ್ನು ಸಹ ಅಲ್ಲಗಳೆದಿರುತ್ತಾರೆ. ಪವರ್ ಆಫ್ ಅಟಾರ್ನಿಯನ್ನು 2.00 ರೂಪಾಯಿ ಮೌಲ್ಯದ ಛಾಪಾ ಕಾಗದದ ಮೇಲೆ ಬರೆಯಬೇಕಾದ ವಿಷಯಕ್ಕೂ ನೋಟರಿಯವರಿಗೂ ಸಂಬಂಧವಿಲ್ಲವೆಂತಲೂ, ಚಿತ್ರದುರ್ಗದಲ್ಲಿ ಚಾಲ್ತಿಯಲ್ಲಿರುವ ಕ್ರಮವೇನೆಂದರೆ, ಮೊದಲು ಒಂದು ದಾಖಲೆಯನ್ನು ಬರೆದು ಸಂಬಂಧಪಟ್ಟವರು ಅದಕ್ಕೆ ಸಹಿ ಮಾಡಿದ ನಂತರ ಆ ದಾಖಲೆಯನ್ನು ಸಬ್ ರಿಜಿಸ್ಟ್ರಾರ್‌ರವರ ಕಛೇರಿಗೆ ತೆಗೆದುಕೊಂಡು ನಿಗಧಿತ ಮುದ್ರಾಂಕ ಶುಲ್ಕವನ್ನು ಪಾವತಿ ಮಾಡಿ ಫ್ರಾಕಿಂಗ್ ಮಾಡಿಸಿಕೊಳ್ಳಬೇಕಿತ್ತೆಂದು ತಿಳಿಸಿರುತ್ತಾರೆ. ಒಂದು ದಾಖಲೆಗೆ ನಿಗಧಿತ ಮುದ್ರಾಂಕ ಶುಲ್ಕ ಪಾವತಿ ಮಾಡಲಾಗಿದೆಯೆ ಇಲ್ಲವೆ ಅಥವಾ ನೋಂದಣಿ ಮಾಡಲಾಗಿದೆಯೆ ಇಲ್ಲವೆ ಎಂಬುದನ್ನು ಗಮನಿಸುವುದು ನೋಟರಿಯವರ ಕರ್ತವ್ಯವಲ್ಲವೆಂದು ತಿಳಿಸಿರುತ್ತಾರೆ.

4. ಮೇಲೆ ಓದಲಾದ (4)ರ ಪತ್ರ ದಿನಾಂಕ : 22–12–2011 ರೊಂದಿಗೆ ದೂರಿನ ಪ್ರತಿ ಹಾಗೂ ನೋಟರಿಯವರು ಲಿಖಿತ ಹೇಳಿಕೆಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರಿಗೆ ಕಳುಹಿಸಿ ನೋಟರಿ ನಿಯಮಗಳು 1956 ನಿಯಮ 13(6–9) ರನ್ವಯ ತನಿಖೆ ನಡೆಸಿ ನೋಟರಿ ನಿಯಮ 13(11)ರನ್ವಯ ವಿಚಾರಣಾ ವರದಿಯನ್ನು ಕಳುಹಿಸುವಂತೆ ಕೋರಲಾಗಿತ್ತು. ಅದರಂತೆ, ಓದಲಾದ (5)ರ ದಿನಾಂಕ : 16–01–2013ರ ಪತ್ರದೊಂದಿಗೆ ಪ್ರಧಾನ ಜಿಲ್ಲಾ ಮತ್ತು ನ್ಯಾಯಾಧೀಶರು ಇವರು ನೋಟರಿ ನಿಯಮ 13(11) ರನ್ವಯ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರು ತಮ್ಮ ವರದಿಯನ್ನು ಶ್ರೀ ಹೆಚ್.ಎಸ್. ಸತ್ಯನಾರಾಯಣಶೆಟ್ಟಿ, ನೋಟರಿಯವರು ತಮ್ಮ ಕಾರ್ಯ ನಿರ್ವಹಿಸುವಲ್ಲಿ ಕರ್ತವ್ಯಚ್ಯುತಿಯನ್ನು ಎಸಗಿದ್ದಾರೆಂಬುದು ಆಗಿರುತ್ತದೆ. ಕಾನೂನಿನ ಪ್ರಕಾರ ಪ್ರತಿಯೊಬ್ಬ ನೋಟರಿಯು ತಮ್ಮ ಮುಂದೆ ಹಾಜರು ಮಾಡಿ ದಾಖಲೆಗಳ ವಿವರಗಳನ್ನು ನಿಗಧಿತ ನಮೂನೆಯಲ್ಲಿ ನಮೂದಿಸುವುದು ಕಡ್ಡಾಯವಾಗಿರುವಾಗ ಪ್ಯಾರೇಜಾನ್‌ರವರ ತೆಗೆದುಕೊಳ್ಳದೆ ಪವರ್ ಆಫ್ ಅಟಾರ್ನಿಯ ವಿವರಗಳನ್ನು ಸಹ ನಮೂದಿಸದೆ ಇರುವುದು ನೋಟರಿ ನಿಯಮಾವಳಿಗಳ ಉಲ್ಲಂಘನೆಯಾಗಿರುತ್ತದೆ. ಆದುದರಿಂದ, ಶ್ರೀ ಹೆಚ್.ಎಸ್. ಸತ್ಯನಾರಾಯಣಶೆಟ್ಟಿರವರು ನೋಟರಿಯಾಗಿ ಕರ್ತವ್ಯಲೋಪ ಎಸಗಿದ್ದಾರೆಂದು ನೋಟರಿ ನಿಯಮಾವಳಿ 1956 ನಿಯಮ 13(11) ರಂತೆ ವರದಿ ನೀಡಿರುತ್ತಾರೆ.

6. ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ) (1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 283 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 12–07–2013.**

ಶ್ರೀ ಹೆಚ್.ಎಸ್. ಸತ್ಯನಾರಾಯಣ ಶೆಟ್ಟಿ, ನೋಟರಿ, ಚಿತ್ರದುರ್ಗ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದು ರುಜುವಾತಾದ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ಶಾಶ್ವತವಾಗಿ ಇವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮಿನರಸಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2) (ಪ್ರಭಾರ),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

P.R. 797

SC-15

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ಶ್ರೀ ಎ.ಬಿ. ಮಂಗಸೂಳಿ, ನೋಟರಿ, ರಾಯಬಾಗ್ ಕಂದಾಯ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದುಹಾಕುವ ಬಗ್ಗೆ ಹಾಗೂ ಶಾಶ್ವತವಾಗಿ ಅವರನ್ನು ನೋಟರಿಯಾಗಿ ನೇಮಕಾತಿಯಾಗದಂತೆ ತಡೆಯುವ ಬಗ್ಗೆ ಆದೇಶ.

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರ ಪತ್ರ ಸಂಖ್ಯೆ : ಆರ್‌ಕೆ/151/2012, ದಿನಾಂಕ : 03–01–2012.
2. ಸರ್ಕಾರದ ಪತ್ರ ಸಂಖ್ಯೆ : ಲಾ 13 ಎಲ್‌ಸಿಎಲ್ 2012, ದಿನಾಂಕ : 06–02–2012.
3. ಶ್ರೀ ಎ.ಬಿ. ಮಂಗಸೂಳಿ ಇವರ ದಿನಾಂಕ : 23–03–2012 ರ ಲಿಖಿತ ಹೇಳಿಕೆ.
4. ಸರ್ಕಾರದ ಪತ್ರ ಸಂಖ್ಯೆ : ಲಾ 03 ಎಲ್‌ಸಿಎಲ್ 2012, ದಿನಾಂಕ : 02–06–2012.
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರ ದಿನಾಂಕ : 07–01–2013ರ ಪತ್ರ.

**ಪ್ರಸ್ತಾವನೆ :**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರು ಮೇಲೆ ಓದಲಾದ (1)ರ ದಿನಾಂಕ : 03–01–2012ರ ಪತ್ರದಲ್ಲಿ ಶ್ರೀ ಎ.ಬಿ. ಮಂಗಸೂಳಿ, ನೋಟರಿ, ರಾಯಬಾಗ್ ಕಂದಾಯ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರ ವಿರುದ್ಧ ಕ್ರಿಮಿನಲ್ ಕೇಸ್ (ನಂ. 204/11) ದಾಖಲಾಗಿರುತ್ತದೆಂದು ತಿಳಿಸಿರುತ್ತಾರೆ. ಓದಲಾದ (2)ರ ಸರ್ಕಾರದ ಪತ್ರ ದಿನಾಂಕ : 06–02–2012ರಲ್ಲಿ ಸದರಿ ನೋಟರಿಯವರನ್ನು, ಅವರ ವಿರುದ್ಧ ಸ್ವೀಕೃತವಾದ ದೂರಿನ ಬಗ್ಗೆ ಲಿಖಿತ ಹೇಳಿಕೆಯನ್ನು ಕೋರಲಾಗಿತ್ತು. ಅದರಂತೆ, ಓದಲಾದ (3)ರ ದಿನಾಂಕ : 23–03–2012 ರಲ್ಲಿ ಸದರಿ ಶ್ರೀ ಎ.ಬಿ. ಮಂಗಸೂಳಿ, ನೋಟರಿ ಇವರು ತಮ್ಮ ಲಿಖಿತ ಹೇಳಿಕೆಯಲ್ಲಿ. ಫಿರ್ಯಾದಿದಾರರು ವಿವರಿಸಿದ ಎಲ್ಲಾ ಅಂಶಗಳು ಸತ್ಯಕ್ಕೆ ದೂರವಾಗಿದ್ದವೆಂದು, ಅವುಗಳನ್ನು ಅವರು ತೀಕ್ಷ್ಣವಾಗಿ ತಿರಸ್ಕರಿಸಿದ್ದು. ಸದರಿ ಒಪ್ಪಿಗೆ ಪ್ರಮಾಣ ಪತ್ರವು ಜಮೀನು ವಾರಸಾ ಮಾಡಿಕೊಳ್ಳುವ ಪ್ರಕರಣಕ್ಕೆ ಸಂಬಂಧಿಸಿದ್ದು. ಸದರಿ ಒಪ್ಪಿಗೆ ಪತ್ರದ ಮೇಲಿನ ಫಿರ್ಯಾದಿದಾರಳ ಯಾವುದೇ ವಾರಸಾ ಹಕ್ಕು ನಷ್ಟವಾಗಿರುವುದಿಲ್ಲ ಮತ್ತು ಅದು ನಿರುಪಯುಕ್ತ ಆಗಿರುತ್ತದೆಂದು ವರದಿ ನೀಡಿರುತ್ತಾರೆ.

2. ಓದಲಾದ (4)ರ ಸರ್ಕಾರಿ ಪತ್ರದ ದಿನಾಂಕ : 02–06–2012ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರಿಗೆ ಸದರಿ ನೋಟರಿಯವರ ವಿರುದ್ಧ ಸ್ವೀಕೃತವಾದ ದೂರು ಮತ್ತು ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ಅವುಗಳನ್ನು ಪರಿಶೀಲಿಸಿ, ಆ ಬಗ್ಗೆ ನೋಟರಿಗಳ ನಿಯಮಗಳು 1956 ನಿಯಮ 13(8)ರನ್ವಯ ವಿಚಾರಣೆ ನಡೆಸಿ ನೋಟರಿ ನಿಯಮ 13(11) ರನ್ವಯ ವಿಚಾರಣಾ ವರದಿಯನ್ನು ಕಳುಹಿಸುವಂತೆ ಕೋರಲಾಗಿತ್ತು. ಅದರಂತೆ, ಓದಲಾದ (5)ರ ದಿನಾಂಕ : 07–01–2013 ರ ಪತ್ರದೊಂದಿಗೆ ಪ್ರಧಾನ ಜಿಲ್ಲಾ ಮತ್ತು ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರು ನೋಟರಿ ನಿಯಮ 13(11) ರನ್ವಯ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಜಿಲ್ಲೆ ಇವರು ತಮ್ಮ ವರದಿಯಲ್ಲಿ ದೂರುದಾರಳಾದ ಶ್ರೀಮತಿ ಬೀಬು ಅಲಿಯಾಸ್ ಸುಶೀಲಬಾಯಿರವರು ಪಾಟಿ ಸವಾಲಿನಲ್ಲಿ ಪ್ರಶ್ನಿತ ಜಮೀನು ಅವರ ತಂದೆಯ ಹೆಸರಿನಲ್ಲಿಯೇ ಇದೆಯೆಂದು ಒಪ್ಪಿದ್ದರೂ ಸಹ ಶ್ರೀ ಎ.ಬಿ. ಮಂಗಸೂಳಿ, ನೋಟರಿ ಇವರು ತಾವು ಪರಿಪಾಲನೆ ಮಾಡಬೇಕಾದ ನೋಟರಿ ರಿಜಿಸ್ಟರ್ ಪುಸ್ತಕಕ್ಕೆ ಅರ್ಜಿದಾರಳಾದ ಶ್ರೀಮತಿ ಬೀಬು ಅಲಿಯಾಸ್ ಸುಶೀಲಬಾಯಿರವರ ಸಹಿಯನ್ನು ಪಡೆದುಕೊಳ್ಳದೆ ಇರುವುದು ಕಂಡು ಬಂದಿದ್ದು, ಅದು ಅಲ್ಪ ಪ್ರಮಾಣದ ಲೋಪವಾಗಿದೆ ಹಾಗೂ ತಮ್ಮ ಕಾರ್ಯ ನಿರ್ವಹಿಸುವಲ್ಲಿ ಕರ್ತವ್ಯಚ್ಯುತಿಯನ್ನು ಎಸಗಿದ್ದಾರೆಂಬುದು ಆಗಿರುತ್ತದೆ.

4. ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 13(12)(ಬಿ) ರನ್ವಯ ಆಪಾದನೆಯ ಗಂಭೀರತೆಯನ್ನು ಗಮನಿಸಿ ನೋಟರಿಯವರ ವಿರುದ್ಧ ಕ್ರಮ ತೆಗೆದುಕೊಳ್ಳಬೇಕೆಂದು, ಸರ್ಕಾರವು ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 13 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ : 12–07–2013.**

ಶ್ರೀ ಎ.ಬಿ. ಮಂಗಸೂಳಿ, ನೋಟರಿ, ಬೆಳಗಾಂ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದು ರುಜುವಾತಾದ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ಶಾಶ್ವತವಾಗಿ ಇವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮಿನರಸಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2) (ಪ್ರಭಾರ),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

P.R. 798

SC-15

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಆಕುಕ 123 ಆರ್‌ಜಿಯು 2013, ಬೆಂಗಳೂರು, ದಿನಾಂಕ : 22ನೇ ಜುಲೈ 2013**

ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ : ಆಕುಕ 123 ಆರ್‌ಜಿಯು 2013, ದಿನಾಂಕ : 03–07–2013ರ ಆದೇಶದ ಭಾಗದಲ್ಲಿನ "ಅಖಿಲ ಭಾರತ ಕೋಟಾದಡಿಯಲ್ಲಿ ಪಡೆದಿರುವ ಸ್ನಾತಕೋತ್ತರ ಸೀಟನ್ನು ದಿನಾಂಕ : 20–07–2013 ಕ್ಕಿಂತ ಮುಂಚಿತವಾಗಿ ಆದ್ಯರ್ಪಣೆ ಮಾಡಿದಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಅವರು ಪಾವತಿಸಬೇಕಾದ ದಂಡವನ್ನು 2013–14ನೇ ಸಾಲಿಗೆ ಅನ್ವಯವಾಗುವಂತೆ ಮಾತ್ರ ಮನ್ನಾ ಮಾಡಿ ಆದೇಶಿಸಿದೆ" ಎಂಬ ಜಾಗದಲ್ಲಿ "**ಅಖಿಲ ಭಾರತ ಕೋಟಾದಡಿಯಲ್ಲಿ ಪಡೆದಿರುವ ಸ್ನಾತಕೋತ್ತರ ಸೀಟನ್ನು ದಿನಾಂಕ : 24–07–2013ಕ್ಕಿಂತ ಮುಂಚಿತವಾಗಿ ಆದ್ಯರ್ಪಣೆ ಮಾಡಿದಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಅವರು ಪಾವತಿಸಬೇಕಾದ ದಂಡವನ್ನು 2013–14ನೇ ಸಾಲಿಗೆ ಅನ್ವಯವಾಗುವಂತೆ ಮಾತ್ರ ಮನ್ನಾ ಮಾಡಿ ಆದೇಶಿಸಿದೆ**" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**ಮೆಹಬೂಬ್ ಖಾನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

**PR. 780**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸೇರಿದ ಇಂಡಿಯನ್ ಬ್ಯಾಂಕ್ ಮಂಡ್ಯ ಬ್ರಾಂಚ್‌ನಲ್ಲಿಟ್ಟಿದ್ದ ರೂ. 5.00 ಕೋಟಿ ಹಣವನ್ನು ವಂಚಿಸಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಡಾ॥ ಹೆಚ್. ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ದಿನಾಂಕ : 16–07–2013 ರಿಂದ ನ್ಯಾಯಾಂಗ ಬಂಧನದಲ್ಲಿರುವುದರಿಂದ ಸೇವೆಯಿಂದ ನಿಲಂಭನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಮಂಡ್ಯ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ : ಎಂಯು.ಎಸ್ (2)114/2013–14 ದಿನಾಂಕ : 16–07–2013.
2. ಸಮಾಜ ಕಲ್ಯಾಣ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಕಇ 258 ಪಕಸೆ 2013, ದಿನಾಂಕ : 24–07–2013.

**ಪ್ರಸ್ತಾವನೆ :**

ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದಿಂದ ಇಂಡಿಯನ್ ಬ್ಯಾಂಕ್, ಮಂಡ್ಯ ಶಾಖೆಯಲ್ಲಿ ಠೇವಣಿ ಇಟ್ಟಿದ್ದ ಐದು ಕೋಟಿ ರೂಪಾಯಿಗಳ ಹಣವನ್ನು ಬ್ಯಾಂಕ್ ಅಧಿಕಾರಿಗಳು ವಂಚಿಸಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾದ ಡಾ॥ ಹೆಚ್. ಎಸ್. ಶಿವರಾಂ ರವರನ್ನು ಮಂಡ್ಯ ಪಶ್ಚಿಮ ಪೋಲೀಸ್ ಠಾಣೆಯಲ್ಲಿ ದಾಖಲಾದ ಕ್ರೈಂ ನಂ. 2/3/2013 ಐ.ಪಿ.ಸಿ. ಸೆಕ್ಷನ್ 408, 409, 468,471,420 ಸಹವಾಚನ ಐ.ಪಿ.ಸಿ. 34ರಡಿ ದಿನಾಂಕ : 15–07–2013ರಂದು ರಾತ್ರಿ 9–45ರ ವೇಳೆಯಲ್ಲಿ ಬಂಧಿಸಿ, ದಿನಾಂಕ : 16–07–2013ರಂದು ಮ್ಯಾಜಿಸ್ಟ್ರೇಟ್‌ರ ಮುಂದೆ ಹಾಜರುಪಡಿಸಲಾಗಿದೆ. ಗೌರ್ವಾನಿತ ನ್ಯಾಯಾಧೀಶರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾದ ಡಾ॥ ಹೆಚ್.ಎಸ್. ಶಿವರಾಂ ರವರನ್ನು ದಿನಾಂಕ : 16–07–2013 ರಿಂದ 20–07–2013ರವರೆಗೆ ಪೊಲೀಸ್ ಕಸ್ಟಡಿಗೆ ಒಪ್ಪಿಸಿದ್ದು ಪ್ರಸ್ತುತ ಸದರಿ ಅವರು ನ್ಯಾಯಾಂಗ ಬಂಧನದಲ್ಲಿರುತ್ತಾರೆಂದು ಮೇಲೆ 1 ರಲ್ಲಿ ಓದಲಾದ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಡಾ॥ ಹೆಚ್. ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ದಿನಾಂಕ : 16–07–2013 ರಿಂದ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಬಂಧನದಲ್ಲಿರುವುದು ದೃಢಪಟ್ಟಿರುವುದರಿಂದ, 1957 ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಾವಳಿಗಳು ನಿಯಮ 10(2)(ಎ) ಅಡಿಯಲ್ಲಿ ಅವರು ಬಂಧನಕ್ಕೊಳಗಾದ ಅವಧಿಯು 48 ಗಂಟೆಗಳಿಗೂ ಹೆಚ್ಚಾಗಿರುವುದರಿಂದ ನಿಲಂಭನೆಯಲ್ಲಿದ್ದರೆಂದು (Deemed Suspension) ಪರಿಗಣಿಸಬೇಕಾಗುತ್ತದೆ. ಡಾ॥ ಹೆಚ್. ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ನಗರಾಭಿವೃದ್ಧಿ ಇಲಾಖೆಯಲ್ಲಿ ನಿಯೋಜನೆಯ ಮೇಲೆ ಕಾರ್ಯನಿರ್ವಹಿಸುತ್ತಿರುವುದರಿಂದ ಇವರನ್ನು ಸೇವೆಯಿಂದ ನಿಲಂಭನೆಗೊಳಿಸಲು 1957 ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಗಳು 15(1)ರಡಿಯಲ್ಲಿನ ಉಪಬಂಧದಂತೆ ಸಮಾಜ ಕಲ್ಯಾಣ ಇಲಾಖೆಯ ಸಹಮತಿಯನ್ನು ಮೇಲೆ 2 ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯ ಮೂಲಕ ಪಡೆಯಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ನಅಇ 320 ಮೈಅಪ್ರಾ 2013 ಬೆಂಗಳೂರು, ದಿನಾಂಕ : 25–07–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(2)(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ॥ ಹೆಚ್. ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರ ವಿರುದ್ಧ ಶಿಸ್ತು ಕ್ರಮ ಹಾಗೂ ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ದಿನಾಂಕ : 16–07–2013 ರಿಂದಲೇ ಪೂರ್ವಾನ್ವಯವಾಗಿ ಅನ್ವಯಿಸುವಂತೆ ನಿಲಂಭನೆಯಲ್ಲಿಟ್ಟು ಆದೇಶಿಸಿದೆ.

ಡಾ॥ ಹೆಚ್. ಎಸ್. ಶಿವರಾಂ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಲಿ ನಿಯೋಜನೆ ಮೇಲೆ ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಹಾಗೂ ಸದರಿಯವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**PR. 781**
**SC. 50**

## ಸಹಕಾರ ಸಚಿವಾಲಯ

**ವಿಷಯ:** 2013–14ನೇ ಸಾಲಿಗೆ ಯಶಸ್ವಿನಿ ಯೋಜನೆಯನ್ನು ಮುಂದುವರೆಸಲು ಹಾಗೂ ಸದಸ್ಯರುಗಳನ್ನು ನೋಂದಾಯಿಸಲು ಮಾರ್ಗ ಸೂಚಿಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶದ ಸಂಖ್ಯೆ:ಸಇ 72 ಆಂಆಸ(ಎ) 2013 ಬೆಂಗಳೂರು, ದಿನಾಂಕ:02.04.2013.

2) ಸರ್ಕಾರದ ಮಾರ್ಗಸೂಚಿ ಸುತ್ತೋಲೆ ಸಂಖ್ಯೆ: ಸಿಒ 45 ಸಿಎಲ್ಎಸ್ 2012 ದಿನಾಂಕ:23.01.2012.

**ಪ್ರಸ್ತಾವನೆ:**

ಮೇಲೆ(1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಯಶಸ್ವಿನಿ ಯೋಜನೆಯನ್ನು 2013–14ನೇ ಸಾಲಿನಲ್ಲಿ ಮುಂದುವರೆಸಲಾದ ಯೋಜನೆಯೆಂದು ಆದೇಶ ಹೊರಡಿಸಲಾಗಿದೆ. ಉಲ್ಲೇಖ(2)ರಲ್ಲಿ 2012–13ರ ಸುತ್ತೋಲೆಯಂತೆ ಯಶಸ್ವಿನಿ ಯೋಜನೆಯಲ್ಲಿ 2012–13ನೇ ಸಾಲಿನಲ್ಲಿ ನೊಂದಾಯಿಸಿಕೊಂಡ ಸದಸ್ಯರಿಗೆ ಯೋಜನೆಯ ಸವಲತ್ತು ದಿನಾಂಕ:31.05.2013ಕ್ಕೆ ಮುಕ್ತಾಯಗೊಳ್ಳುತ್ತಿರುವುದರಿಂದ, ರೈತ ಸಹಕಾರಿಗಳನ್ನು ನೊಂದಾವಣೆ ಮಾಡಿಕೊಳ್ಳಲು ಉಲ್ಲೇಖ (1)ರಲ್ಲಿ ಸರ್ಕಾರ ಮುಂದುವರೆಸಲಾದ ಯೋಜನೆಯೆಂದು ಆದೇಶ ಹೊರಡಿಸಿದ ಹಿನ್ನಲೆಯಲ್ಲಿ 2013–14ನೇ ಸಾಲಿಗೆ ಯಶಸ್ವಿನಿ ಸದಸ್ಯರನ್ನು ನೊಂದಾಯಿಸಲು ಮಾರ್ಗಸೂಚಿಗಳನ್ನು ನೀಡಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/21/ಸಿಎಲ್ಎಸ್/2013,ಬೆಂಗಳೂರು ದಿನಾಂಕ:05.06.2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರ ಯಶಸ್ವಿನಿ ಯೋಜನೆಯನ್ನು 2013–14ನೇ ಸಾಲಿಗೆ ಮುಂದುವರೆಸಲು ಆದೇಶಿಸಿ, ಯಶಸ್ವಿನಿ ಸದಸ್ಯರನ್ನು ನೊಂದಾಯಿಸಲು ಈ ಕೆಳಕಂಡ ಮಾರ್ಗಸೂಚಿಗಳನ್ನು ಹೊರಡಿಸಿದೆ.

1. ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯು 2003–04ನೇ ಸಾಲಿನಿಂದ ರಾಜ್ಯದ ಗ್ರಾಮೀಣ ಸಹಕಾರಿಗಳಿಗೆ ಉತ್ತಮ ಗುಣಮಟ್ಟದ ಆರೋಗ್ಯ ರಕ್ಷಣೆಯನ್ನು ಒದಗಿಸಲು ಕರ್ನಾಟಕ ಸರ್ಕಾರ ಜಾರಿಗೊಳಿಸಿರುವ ಒಂದು ಸ್ವಯಂ–ನಿಧಿ ಶಸ್ತ್ರ ಚಿಕಿತ್ಸಾ ಯೋಜನೆಯಾಗಿದೆ. ಒಬ್ಬ ವ್ಯಕ್ತಿ ಗ್ರಾಮೀಣ ಸಹಕಾರ ಸಂಘಗಳಾದ ಸಹಕಾರ ಕೃಷಿಪತ್ತಿನ / ಗ್ರಾಮೀಣ ಕೃಷಿಯೇತರ ಸಹಕಾರ ಸಂಘಗಳ, ಗ್ರಾಮೀಣ ವಿವಿದ್ದೋದ್ದೇಶ ಸಹಕಾರ ಸಂಘಗಳ,ಹಾಲು ಉತ್ಪಾದಕರ ಸಹಕಾರ ಸಂಘಗಳ, ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳ, ತೋಟಗಾರಿಕಾ ಸಹಕಾರ ಸಂಘಗಳ (ಕೃಷಿ/ತೋಟಗಾರಿಕೆ/ಹೈನುಗಾರಿಕೆ ಉತ್ಪನ್ನಗಳ ಸಂಸ್ಕರಣ ಸಹಕಾರ ಸಂಘಗಳೂ ಸೇರಿ), ಕುರಿ ಸಾಕಾಣಿಕೆ ಮತ್ತು ಕುರಿ ಉತ್ಪನ್ನಗಳ ಸಹಕಾರ ಸಂಘಗಳು, ಸಹಕಾರಿ ಸಕ್ಕರೆ ಕಾರ್ಖಾನೆಗಳ, ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳ, ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿನ ಮೀನುಗಾರರ, ಬೀಡಿಕಾರ್ಮಿಕರ ಮತ್ತು ನೇಕಾರ ಸಹಕಾರ ಸಂಘ ಇತ್ಯಾದಿಗಳೊಂದರ ಸದಸ್ಯನಾಗಿ ಕನಿಷ್ಠ ಆರು ತಿಂಗಳಾಗಿದ್ದಲ್ಲಿ, ಆತನು ಹಾಗೂ ಅವನ ಕುಟುಂಬದ ಎಲ್ಲಾ ಸದಸ್ಯರು 2013–14ನೇ ಸಾಲಿನಲ್ಲಿ ನಿಗದಿತ ವಂತಿಗೆಯನ್ನು ಪಾವತಿ ಮಾಡುವ ಮೂಲಕ ಯಶಸ್ವಿನಿ ಯೋಜನೆಯ ಸದಸ್ಯರಾಗಬಹುದು.ಅಲ್ಲದೆ ರಾಜ್ಯದ ಗ್ರಾಮೀಣ ಪ್ರದೇಶದ ಚಲನಚಿತ್ರ ಕಲಾವಿದರುಗಳ, ರಂಗಭೂಮಿ ಕಲಾವಿದರುಗಳ, ಜಾನಪದಕಲಾವಿದರುಗಳ ಸಾಂಸ್ಕೃತಿಕ ಅಭಿವೃದ್ಧಿ ಸಹಕಾರ ಸಂಘಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿದ್ದು ಕಾಫಿ ಬೆಳೆಯುವ ಜಿಲ್ಲೆಗಳ ಕಾಫಿ ತೋಟಗಳಲ್ಲಿ ಕೆಲಸ ಮಾಡುತ್ತಿರುವ ಪ್ಲಾಂಟೇಷನ್ ಕಾರ್ಮಿಕರುಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಕೃಷಿ ಕ್ಷೇತ್ರದಿಂದ ಆಯ್ಕೆಯಾಗಿರುವ ರೈತ ಪ್ರತಿನಿಧಿಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ಪತ್ರಕರ್ತರುಗಳು (ಪಟ್ಟಣ ಪ್ರದೇಶದ ಪತ್ರಕರ್ತ ಸದಸ್ಯರನ್ನು ಹೊರತುಪಡಿಸಿ), ರಾಜ್ಯದ ಗ್ರಾಮೀಣ ಪ್ರದೇಶದಲ್ಲಿರುವ ಅಲೆಮಾರಿ, ಅರೆ–ಅಲೆಮಾರಿ ಜನಾಂಗಗಳ ವಿವಿದ್ದೋದ್ದೇಶ ಸಹಕಾರಿ ಸಂಘಗಳ ಹಾಗೂ ಇತರೆ ವಿವಿದ್ದೋದ್ದೇಶ ಸಹಕಾರ ಸಂಘಗಳ ಸದಸ್ಯರು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ವತಿಯಿಂದ ಸಂಘಟಿಸಲ್ಪಟ್ಟಿರುವ ಎಲ್ಲಾ ಗ್ರಾಮೀಣ ಸ್ವ–ಸಹಾಯ ಗುಂಪು ಮತ್ತು ಸ್ತ್ರೀ–ಶಕ್ತಿ ಗುಂಪುಗಳ ಸದಸ್ಯರು, ಗ್ರಾಮೀಣ ಪ್ರದೇಶದಲ್ಲಿನ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ಲೈಂಗಿಕ ಅಲ್ಪಸಂಖ್ಯಾತರು (ಮಂಗಳ ಮುಖಿಯರು), ಅಲ್ಲದೇ ಸಹಕಾರ ಸಂಘ/ಬ್ಯಾಂಕ್‌ಗಳೊಡನೆ ವ್ಯವಹರಿಸುತ್ತಿರುವ ಗ್ರಾಮೀಣ ಪ್ರದೇಶದಲ್ಲಿರುವ ಸ್ವ–ಸಹಾಯ ಗುಂಪು ಹಾಗೂ ಸ್ತ್ರೀ ಶಕ್ತಿ ಗುಂಪಿನ ಸದಸ್ಯರು ಮತ್ತು ಅವರ ಕುಟುಂಬದ ಸದಸ್ಯರು ಕೂಡ ಯೋಜನೆಯಲ್ಲಿ ಸದಸ್ಯರಾಗಲು ಅರ್ಹರಿರುತ್ತಾರೆ. ಆದರೆ ಅಂತಹ ಸ್ವಸಹಾಯ ಗುಂಪುಗಳು ಸ್ಥಾಪನೆ/ನೋಂದಾವಣೆಯಾಗಿ ಕನಿಷ್ಠ ಆರು ತಿಂಗಳು ಕಳೆದಿರಬೇಕು.

2. ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಲು ಒಬ್ಬ ವ್ಯಕ್ತಿಯು ಸಹಕಾರ ಸಂಘದ ಸದಸ್ಯನಾಗಿರಬೇಕು. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಅಡಿ ಅಥವಾ ಕರ್ನಾಟಕ ಸೌಹಾರ್ದ ಸಹಕಾರ ಅಧಿನಿಯಮ 1997ರ ಅಡಿ ಅಥವಾ ಬಹು ರಾಜ್ಯ ಸಹಕಾರ ಸಂಘಗಳ ಅಧಿನಿಯಮ 2007ರ ಅಡಿ ನೋಂದಾಯಿಸಿದ ಹಾಗೂ ಮೇಲೆ ಸೂಚಿಸಿರುವ ಯಾವುದೇ ಒಂದು ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು 01.08.2013ಕ್ಕೆ ಕನಿಷ್ಠ ಆರು ತಿಂಗಳಾಗಿರಬೇಕು.

3. ಆದಾಗ್ಯೂ ನಗರ/ ಪಟ್ಟಣದ ಜೊತೆಗೆ ಮಹಾನಗರ ಪಾಲಿಕೆ ವ್ಯಾಪ್ತಿಗೆ ಒಳಪಟ್ಟಿರುವ ಪ್ರದೇಶದಲ್ಲಿನ ಕೃಷಿ ಪತ್ತಿನ ಸಹಕಾರ ಸಂಘಗಳ/ಹಾಲು ಉತ್ಪಾದಕರ ಸಹಕಾರ ಸಂಘಗಳ ಸದಸ್ಯರು ಮಹಾನಗರಪಾಲಿಕೆ/ನಗರ/ಪಟ್ಟಣ ಪ್ರದೇಶದಲ್ಲಿ ವಾಸಿಸುತ್ತಿದ್ದು, ಅವರು ಸದಸ್ಯತ್ವ ಹೊಂದಿರುವ ಸಹಕಾರ ಸಂಘಗಳ ವ್ಯಾಪ್ತಿಯಲ್ಲಿ ಕೃಷಿ ಜಮೀನು ಹೊಂದಿರುವವರು, ಈಗಾಗಲೇ ಕಳೆದ ಸಾಲುಗಳಲ್ಲಿ ಯೋಜನೆಯಡಿಯಲ್ಲಿ ಸದಸ್ಯತ್ವ ನೊಂದಾವಣೆಯಾಗಿದ್ದಲ್ಲಿ, ಪ್ರಸಕ್ತ ಸಾಲಿಗೂ ಸಹ ಅಂತಹವರುಗಳು ಯೋಜನೆಯಡಿಯಲ್ಲಿ ನವೀಕರಿಸಲು /ನೋಂದಾಯಿಸಲು ಅರ್ಹರಾಗಿತ್ತಾರೆ.

4. ಅವಿಭಕ್ತ ಕುಟುಂಬದ ಯಾವುದೇ ಒಬ್ಬ ಸದಸ್ಯನು/ಸದಸ್ಯಳು ಮೇಲೆ ತಿಳಿಸಿರುವ ಅರ್ಹ ಸಹಕಾರ ಸಂಘದ ಸದಸ್ಯನಾಗಿ/ಳಾಗಿ ಯಶಸ್ವಿನಿ ವರ್ಷದ ಮೊದಲ ದಿನ **ಅಂದರೆ 01.08.2013ಕ್ಕೆ** ಆರು ತಿಂಗಳಾಗಿದ್ದಲ್ಲಿ, ಆ ಕುಟುಂಬದ ಪ್ರತಿಯೊಬ್ಬ ಸದಸ್ಯನೂ ನಿಗದಿತ ಅವಧಿಯಲ್ಲಿ ವಾರ್ಷಿಕ ವಂತಿಗೆ ಸಲ್ಲಿಸುವ ಮೂಲಕ ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಬಹುದು. ಅವಿಭಕ್ತ ಕುಟುಂಬ ಅಂದರೆ ತಂದೆ, ತಾಯಿ, ಗಂಡು/ ಮದುವೆಯಾಗದ ಹೆಣ್ಣು ಮಕ್ಕಳು, ಸೊಸೆ, ಮೊಮ್ಮಕ್ಕಳೂ ಸೇರಿ ಎಂದು ಅರ್ಥೈಯಿಸುವುದು.

5. ಮದುವೆಯಾಗಿರುವ ಹೆಣ್ಣು ಮಗಳು ಹಾಗೂ ಅವಳ ಮಕ್ಕಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಕುಟುಂಬದಲ್ಲಿಯೇ ಅಂದರೆ ಪ್ರಧಾನ ಅರ್ಜಿದಾರರ ಕುಟುಂಬದಲ್ಲಿ ವಾಸವಾಗಿದ್ದರೆ, ಅವರ ಪಾಲಿನ ವಂತಿಗೆ ಹಣ ಪಾವತಿಸಿದರೆ ನವೀಕರಣ/ನೋಂದಾವಣೆಗೆ ಹಾಗೂ ಯೋಜನೆಯ

ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. ಆದಾಗ್ಯೂ, 2013–14ನೇ ಸಾಲಿನ ಯೋಜನೆಯ ಅವಧಿಯಲ್ಲಿ ಮದುವೆಯಾದ ಹೆಣ್ಣು ಮಗಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಜೊತೆ ವಾಸವಾಗಿರದೆ ಸಂಘದ ಕಾರ್ಯವ್ಯಾಪ್ತಿಯ ಹೊರಗೆ ವಾಸವಿದ್ದರೆ ಅಂಥಹ ಸಂದರ್ಭದಲ್ಲಿ ಮೇಲೆ ವಿವರಿಸಿದಂತೆ ಅವಿಭಕ್ತ ಕುಟುಂಬದ ಸದಸ್ಯೆಯಾಗಿ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹರಾಗುವುದಿಲ್ಲ. ಆದರೆ, ಅವಳೇ ಸಹಕಾರ ಸಂಘದ ಸದಸ್ಯೆಯಾಗಿ ಯಶಸ್ವಿನಿ ವರ್ಷದ ಮೊದಲ ದಿನಕ್ಕೆ ಆರು ತಿಂಗಳು ಕಳೆದಿದ್ದಲ್ಲಿ, ಈ ನಿರ್ಬಂಧ ಅಂಥವಳಿಗೆ ಅನ್ವಯಿಸುವುದಿಲ್ಲ. ಮದುವೆಯಾಗಿ ಗಂಡನ ಮನೆಯಲ್ಲಿ ವಾಸ ಮಾಡುತ್ತಿರುವ ಹಾಗೂ ಪ್ರಧಾನ ಅರ್ಜಿದಾರರ ಜೊತೆಯಲ್ಲಿ ವಾಸ ಮಾಡದೇ ಇರುವ ಹೆಣ್ಣು ಮಕ್ಕಳಿಂದ ಸಹಕಾರ ಸಂಘಗಳು ವಂತಿಗೆಯನ್ನು ಸ್ವೀಕರಿಸತಕ್ಕದಲ್ಲ.

6. 2013–14ನೇ ಸಾಲಿನಲ್ಲಿ ಮದುವೆಯಾಗದ ಹೆಣ್ಣುಮಕ್ಕಳಿಗೆ ಪ್ರಧಾನ ಅರ್ಜಿದಾರರು ವಂತಿಗೆ ಪಾವತಿಸಿದ್ದು, ಆನಂತರ ಮದುವೆಯಾಗಿದ್ದಲ್ಲಿ ಅಂತಹ ಮದುವೆಯಾದ ಹೆಣ್ಣು ಮಕ್ಕಳಿಗೆ ಪ್ರಸಕ್ತ ಸಾಲಿನಲ್ಲಿ 31.07.2014ರವರೆಗೆ ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಬಹುದಾಗಿದೆ.

7. **2013–14ನೇ ಸಾಲಿಗೆ ಯಶಸ್ವಿನಿ ವಾರ್ಷಿಕ ವಂತಿಗೆಯನ್ನು ಪ್ರತಿಯೊಬ್ಬರಿಗೆ ರೂ.210/–ಕ್ಕೆ ನಿಗದಿಗೊಳಿಸಲಾಗಿದೆ.** ಈ ಯೋಜನೆಯ ಪ್ರಯೋಜನ ಪಡೆಯಲು ಉದ್ದೇಶಿಸುವ ಪ್ರತಿಯೊಬ್ಬರು ರೂ.210/– ರಂತೆ ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಉದ್ದೇಶಿಸಿದ ಪ್ರತಿಯೊಬ್ಬ ಸದಸ್ಯರಿಗೆ ಕಡ್ಡಾಯವಾಗಿ ಪಾವತಿ ಮಾಡಬೇಕು. ಈ ಪೈಕಿ ರೂ.10/– ಅನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ರೂ.200/–ಗಳನ್ನು ಹಣ ಸ್ವೀಕರಿಸಿದ 15 ದಿನಗಳೊಳಗಾಗಿ ಸಂಬಂಧಿಸಿದ ಜಿಲ್ಲಾ ಸಹಕಾರಿ ಬ್ಯಾಂಕುಗಳಲ್ಲಿ ಯಶಸ್ವಿನಿ ಟ್ರಸ್ಟ್ ಹೊಂದಿರುವ ಖಾತೆಗೆ ಜಮಾ ಮಾಡಬೇಕು/ವರ್ಗಾಯಿಸತಕ್ಕದ್ದು. ವಿಳಂಬವಾದಲ್ಲಿ ಆ ಹಣವನ್ನು ಇಟ್ಟುಕೊಂಡ ಸಹಕಾರಿ ಸಂಘ/ಸಂಸ್ಥೆಯವರು ಬ್ಯಾಂಕಿನ ನಿಯಮಗಳ ಪ್ರಕಾರ ವಿಳಂಬದ ಅವಧಿಗೆ ಬಡ್ಡಿ ಪಾವತಿ ಮಾಡಲು ಬದ್ಧರಾಗುತ್ತಾರೆ.

8. ಒಂದೇ ಕುಟುಂಬದ ಸದಸ್ಯರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಿದಲ್ಲಿ, ನೀಡಲಾಗುತ್ತಿರುವ ವಿಶೇಷ ರಿಯಾಯಿತಿಯನ್ನು ಪ್ರಸಕ್ತ ವರ್ಷ ಅಂದರೆ 2013–14ನೇ ಸಾಲಿಗೂ ಮುಂದುವರಿಸಲಾಗಿದೆ. ಯಾವುದೇ ಒಂದು ಕುಟುಂಬದಲ್ಲಿ ಐವರು ಅಥವಾ ಅದಕ್ಕಿಂತ ಹೆಚ್ಚಿಗೆ ಕುಟುಂಬ ಸದಸ್ಯರನ್ನು ಯಶಸ್ವಿನಿ ಸದಸ್ಯರನ್ನಾಗಿ ನೋಂದಾಯಿಸಿದಲ್ಲಿ/ನವೀಕರಿಸಿದಲ್ಲಿ ಅವರು ಪಾವತಿಸಬೇಕಾದ ವಂತಿಗೆ ಹಣದಲ್ಲಿ ಅಂದರೆ ಪ್ರತಿ ಸದಸ್ಯರಿಗೆ ರೂ.200/–ರಲ್ಲಿ ಶೇ.15 ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ.

9. ಯಶಸ್ವಿನಿ ಸದಸ್ಯರಾಗಲು ನಿಗದಿಗೊಳಿಸಿದ ಗರಿಷ್ಠ ವಯೋಮಿತಿ 75 ವರ್ಷ ಮುಂದುವರೆದಿರುತ್ತದೆ. ಅಂದರೆ ಯಾವುದೇ ಒಬ್ಬ ವ್ಯಕ್ತಿಯು ಯೋಜನೆಯ ಸೌಲಭ್ಯವನ್ನು ಪಡೆಯಲು ಯಶಸ್ವಿನಿ ವರ್ಷ ಪ್ರಾರಂಭ ಆಗುವ ದಿನ ಅಂದರೆ 01.08.2013ಕ್ಕೆ 75 ವರ್ಷ ಮುಗಿಸಿದ್ದಲ್ಲಿ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹನಾಗುವುದಿಲ್ಲ.

10. ನವಜಾತ ಶಿಶುವಿನ ತಾಯಿಯ ಹೆಸರು ಯಶಸ್ವಿನಿ ಕಾರ್ಡ್‌ನಲ್ಲಿದ್ದರೆ 30 ದಿನಗಳವರೆಗೆ ತಾಯಿ ಹೆಸರು ಇರುವ ಕಾರ್ಡಿನ ಆಧಾರದ ಮೇಲೆ ಈ ಯೋಜನೆಯಡಿಯಲ್ಲಿ ಬರುವ ಸೌಲಭ್ಯವನ್ನು ಪಡೆಯಬಹುದು. 30 ದಿನಗಳ ನಂತರದಲ್ಲಿ ಮಗುವಿನ ಹೆಸರಿನೊಂದಿಗೆ ಆ ವರ್ಷದಲ್ಲಿ ಯಾವ ಸಂದರ್ಭದಲ್ಲಿಯೂ ನೋಂದಾಯಿಸಿಕೊಂಡು ಯೋಜನೆಯ ಸವಲತ್ತು ಪಡೆಯಬಹುದು.

11. ಯಶಸ್ವಿನಿ ಯೋಜನೆಯು ಒಂದು ಸ್ವಂತ ಬಂಡವಾಳ ಯೋಜನೆಯಾಗಿದ್ದು, ಯೋಜನೆಯಡಿ ಸದಸ್ಯರಿಂದ ಸಂಗ್ರಹಿಸಿದ ವಂತಿಗೆಯ ಮೊತ್ತಕ್ಕಿಂತ ಶಸ್ತ್ರಚಿಕಿತ್ಸಾ ವೆಚ್ಚ ಪ್ರತಿ ವರ್ಷ ಹೆಚ್ಚಿಗೆ ಪಾವತಿ ಆಗುತ್ತಿದೆ. ಯೋಜನೆಯ ಸಬಲತೆಯ ದೃಷ್ಟಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಸದಸ್ಯರುಗಳನ್ನು ನೋಂದಾಯಿಸಲು ಪ್ರಯತ್ನಿಸುವುದು ಅತೀ ಅವಶ್ಯವಾಗಿದೆ. 2003–04ರಲ್ಲಿ ಯೋಜನೆಯನ್ನು ಸುಮಾರು 16.00 ಲಕ್ಷ ಸದಸ್ಯರುಗಳ ನೋಂದಾವಣೆಯೊಂದಿಗೆ ಪ್ರಾರಂಭಿಸಲಾಗಿದ್ದು, ಪ್ರತಿ ವರ್ಷಗಳಲ್ಲಿ ನೋಂದಾವಣೆ ಪ್ರಗತಿಯಾಗುತ್ತಾ ಬಂದಿದ್ದು 2012–13ನೇ ಸಾಲಿನಲ್ಲಿ ಗರಿಷ್ಠ 30.36 ಲಕ್ಷ ಸದಸ್ಯರ ನೋಂದಾವಣೆ ಆಗಿರುತ್ತದೆ. ಗ್ರಾಮೀಣ ಪ್ರದೇಶದ ಸಹಕಾರ ಸಂಘಗಳ ಸದಸ್ಯರ ಸಂಖ್ಯೆಯೇ ಸುಮಾರು 1.25 ಕೋಟಿ ಇರುವುದನ್ನು ಮತ್ತು ಗ್ರಾಮೀಣ ಪ್ರದೇಶದ ಸ್ತ್ರೀ ಶಕ್ತಿ ಗುಂಪು/ ಸ್ವಸಹಾಯ ಗುಂಪುಗಳ ಸದಸ್ಯರ ಸಂಖ್ಯೆಯನ್ನು ಗಮನಿಸಿದಾಗ ಯೋಜನೆಗೆ ಒಳಪಡಿಸಬಹುದಾದವರ ಸಂಖ್ಯೆ ಹೆಚ್ಚಿಗೆ ಇರುತ್ತದೆ. ಆದ್ದರಿಂದ, 2013–14ನೇ ಸಾಲಿನಲ್ಲಿ ಕನಿಷ್ಠ 50.00ಲಕ್ಷ ಸದಸ್ಯರುಗಳನ್ನು ನೋಂದಾಯಿಸುವ ಗುರಿ ನಿಗದಿಪಡಿಸಲಾಗಿದೆ. ಪ್ರತಿ ಜಿಲ್ಲೆಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟು ಸಹಕಾರ ಸಂಘಗಳ ನಿಬಂಧಕರು ಪ್ರತಿ ಜಿಲ್ಲೆಗೆ ಪ್ರತ್ಯೇಕ ಗುರಿ ನಿಗದಿಗೊಳಿಸುವಂತೆ ಸೂಚಿಸಲಾಗಿದೆ.

12. 2012–13ನೇ ಸಾಲಿನಲ್ಲಿ 30.36 ಲಕ್ಷ ಸದಸ್ಯರನ್ನಾಗಿ ನೋಂದಾಯಿಸಿದ್ದು, ಅವರೆಲ್ಲರೂ **2013–14 ನೇ ಸಾಲಿಗೆ ಯಶಸ್ವಿನಿ** ಸದಸ್ಯರುಗಳನ್ನಾಗಿ **ನವೀಕರಿಸುವಂತೆ ನೋಡಿಕೊಳ್ಳತಕ್ಕದ್ದು ಮತ್ತು ಒಟ್ಟು ನೋಂದಾವಣೆಯಲ್ಲಿ ಗಣನೀಯ ಸಾಧನೆ ಮಾಡಿ 50.00 ಲಕ್ಷ ಸದಸ್ಯರುಗಳನ್ನು ಯಶಸ್ವಿನಿ ಯೋಜನೆಯಲ್ಲಿ ನೋಂದಾಯಿಸಬೇಕು.**

13. **2013–14ನೇ ಸಾಲಿಗೆ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ ಕಾರ್ಯಕ್ರಮವನ್ನು ಈ ಕೆಳಗಿನಂತೆ ನಿಗದಿಗೊಳಿಸಲಾಗಿದೆ.**

    ಅ) ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ/ ನವೀಕರಿಸುವ ಪ್ರಕ್ರಿಯೆಯನ್ನು **ಪ್ರಾರಂಭ ಮಾಡುವ ದಿನಾಂಕ: 15.07.2013.**

    ಆ) ಯಶಸ್ವಿನಿ ಸದಸ್ಯರುಗಳನ್ನು ನವೀಕರಿಸಲು **ಮುಕ್ತಾಯ ದಿನಾಂಕ: 31.08.2013.**

    ಇ) ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಮುಕ್ತಾಯ **ದಿ:15.10.2013.**

14. ಯಶಸ್ವಿನಿ ಯೋಜನೆಯಡಿಯಲ್ಲಿ 2012–13ನೇ ಸಾಲಿನಲ್ಲಿ ಸದಸ್ಯರಾಗಿದ್ದವರಿಗೆ ನವೀಕರಿಸಲು ಮುಕ್ತಾಯ ದಿನಾಂಕ:31.08.2013 ಎಂದು ನಿಗಧಿಪಡಿಸಿರುವುದರಿಂದ, ಅಲ್ಲಿಯವರೆಗೂ ಯಶಸ್ವಿನಿ ಯೋಜನೆಯ ಸೌಲಭ್ಯವನ್ನು ಈ ಹಿಂದಿನಂತೆಯೇ ಪಡೆಯಲು ಅರ್ಹರಿರುತ್ತಾರೆ. ದಿ:31.08.2013ರೊಳಗೆ ಯಾರು ನವೀಕರಣ ಮಾಡಿಕೊಳ್ಳುವುದಿಲ್ಲವೋ ಅವರಿಗೆ ನೋಂದಾವಣೆ ಮುಕ್ತಾಯ ಅವಧಿಯ ಒಳಗೆ ದಿ:31.08.2013ರ ನಂತರ ಯಾವ ದಿನಾಂಕದಿಂದ ನವೀಕರಣ ಮಾಡುತ್ತಾರೋ ಅಂದಿನಿಂದ ಯಶಸ್ವಿನಿ ಸೌಲಭ್ಯಕ್ಕೆ ಅರ್ಹರು.

15. ಮೇಲೆ ನಮೂದಿಸಿದ ದಿನಾಂಕಗಳ ನಂತರದ ಅವಧಿ ಮುಂದುವರಿಯದಿದ್ದಲ್ಲಿ, ಯಶಸ್ವಿನಿ ಸದಸ್ಯರುಗಳ ನೋಂದಾಯಿಸುವಿಕೆಗೆ/ ನವೀಕರಣಕ್ಕೆ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಒಂದು ವೇಳೆ ನಿಗದಿತ ದಿನಾಂಕಗಳ ನಂತರ ನೋಂದಾಯಿಸಿದಲ್ಲಿ ಅಂಥವರು ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ.

16. 2013–14ನೇ ಸಾಲಿನಲ್ಲಿ ಯಶಸ್ವಿನಿ ಸದಸ್ಯರುಗಳನ್ನು ಹೊಸದಾಗಿ ನೋಂದಾಯಿಸಲು ಮತ್ತು ನವೀಕರಣ ಮಾಡುವವರಿಗೂ 2013–14ನೇ ಸಾಲಿನಲ್ಲಿ ಸರಬರಾಜು ಮಾಡಿರುವ ಹೊಸ ನೊಂದಾವಣಿ ಫಾರಂಗಳನ್ನು ಮಾತ್ರ ಎಲ್ಲರಿಗೂ ಉಪಯೋಗಿಸಬೇಕು. ಅಂದರೆ ಹೊಸದಾಗಿ ನೊಂದಾಯಿಸಿಕೊಂಡ ಹಾಗೂ ನವೀಕರಣ ಮಾಡಿಕೊಂಡವರಿಗೆ ಹೊಸ ಗುರುತಿನ ಚೀಟಿ ಒದಗಿಸಬೇಕು. ಬೇರೆ ಯಾವುದೇ ವರ್ಷಗಳಲ್ಲಿ ನೀಡಿರುವ ಫಾರಂಗಳನ್ನು ಉಪಯೋಗಿಸತಕ್ಕದ್ದಲ್ಲ. ಹೊಸದಾಗಿ ಸದಸ್ಯರುಗಳ ನೋಂದಾವಣೆಗೆ ಬೇಕಾದ ಅವಶ್ಯಕ ಸಂಖ್ಯೆಯ ಫಾರಂಗಳನ್ನು ಸಹಕಾರ ಸಂಘಗಳ ಉಪನಿಬಂಧಕರುಗಳು ಟ್ರಸ್ಟ್ ಕಛೇರಿಯಿಂದ ಪಡೆದು ಅವರ ವ್ಯಾಪ್ತಿಯ ಸಹಕಾರ ಸಂಘಗಳ ಕಾರ್ಯದರ್ಶಿಗಳಿಗೆ ಫಾರಂ ಮಸ್ತಕಗಳನ್ನು ಹಂತಹಂತವಾಗಿ ಪೂರೈಸಿ ಸ್ವೀಕೃತಿ ಪಡೆಯಬೇಕು. ಒಮ್ಮೆ ಪೂರೈಸಿದ ಫಾರಂಗಳಲ್ಲಿ ಸಹಕಾರ ಸಂಘದವರು ಮಾಹಿತಿಯನ್ನು ಪೂರ್ತಿಯಾಗಿ ನಮೂದಿಸಿ ವಂತಿಗೆ ಹಣವನ್ನು ಬ್ಯಾಂಕಿಗೆ ಪಾವತಿ ಮಾಡಿದ ನಂತರವೇ ಮತ್ತೆ ಫಾರಂಗಳನ್ನು ಒದಗಿಸಬೇಕು. ಸಹಕಾರ ಸಂಘಕ್ಕೆ ಫಾರಂ ಪೂರೈಸುವಾಗ ಮಸ್ತಕದ ಸಂಖ್ಯೆ ಮತ್ತು ಯುನಿಕ್ ಐ.ಡಿ ಸಂಖ್ಯೆಯನ್ನು ನಮೂದಿಸಿ ಕಾರ್ಯದರ್ಶಿಯಿಂದ ಸ್ವೀಕೃತಿ ಪಡೆದುಕೊಳ್ಳಬೇಕು. ಈ ಬಗ್ಗೆ ಪರಿಶೀಲನೆಗಾಗಿ ಪ್ರತ್ಯೇಕ ಮಸ್ತಕದಲ್ಲಿ ಬರೆದಿಟ್ಟಿರಬೇಕು.

17. ಅರ್ಹ ಸಹಕಾರ ಸಂಘಗಳು ಸದಸ್ಯರುಗಳಿಂದ ನಿಗದಿತ ವಾರ್ಷಿಕ ವಂತಿಗೆ ಹಣ ಪಡೆದು ಸಂಘದ ಹಣ ಸ್ವೀಕೃತಿ ರಶೀದಿಯನ್ನು ಕೊಡಬೇಕು. ಫಾರಂನಲ್ಲಿ ಸದಸ್ಯರನ್ನು ನೋಂದಾಯಿಸಿದ **ತಿಂಗಳು, ವರ್ಷ ಮತ್ತು ದಿನಾಂಕವನ್ನು ತಪ್ಪದೆ ನಮೂದಿಸಬೇಕು**. ನೋಂದಾವಣೆ ಫಾರಂನ ಕೆಳಭಾಗವನ್ನು ಸದಸ್ಯರಿಗೆ ಕೊಡಬೇಕು. ಮೇಲ್ಭಾಗವನ್ನು ಡಾಟಾ ಎಂಟ್ರಿ ಮಾಡಲು ಸಂಬಂಧಿಸಿದ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರಿಗೆ ಪ್ರತಿ ತಿಂಗಳ ಕೊನೆಯಲ್ಲಿ ಸಂಗ್ರಹಿಸಿದ ವಂತಿಗೆಯ ಹಣವನ್ನು ಬ್ಯಾಂಕಿಗೆ ಜಮೆ ಮಾಡಿ ರಶೀದಿಯೊಂದಿಗೆ ಕಳಿಸಬೇಕು ಮತ್ತು ಆಗಿಂದಾಗ್ಗೆ ಡಾಟಾ ಎಂಟ್ರಿ ಮಾಡಲು ಅನುಕೂಲವಾಗುವಂತೆ ಪ್ರತಿತಿಂಗಳ ಕೊನೆಯಲ್ಲಿ ಹೊಸ ನೋಂದಾವಣೆ ಅರ್ಜಿ/ ನವೀಕರಣದ ವಿವರಗಳನ್ನು ಅಂದರೆ ಹೊಸ ಅರ್ಜಿಗಳಲ್ಲಿ ಸದಸ್ಯರುಗಳ ಫೋಟೋ ಅಂಟಿಸಿ, ಎಲ್ಲಾ ವಿವರಗಳೊಂದಿಗೆ ಹೊಸದಾಗಿ ನೋಂದಾಯಿಸಿದ ಮತ್ತು ನವೀಕರಣವಾದ ಸದಸ್ಯರುಗಳ ತಖ್ತೆಯೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ನೀಡಿ ಸ್ವೀಕೃತಿ ಪಡೆಯಬೇಕು.

18. ಈ ಹಿಂದೆ ಯಶಸ್ವಿನಿ ಸದಸ್ಯರಿಗೆ ಕೊಡಲಾಗುತ್ತಿದ್ದ ಗುರುತಿನ ಚೀಟಿ ಮತ್ತು ರಶೀದಿಯ ಹಿಂಭಾಗದಲ್ಲಿ ನೋಂದಾಯಿಸಿದ ಫೋಟೋ ಅಂಟಿಸುವ ಪದ್ಧತಿ ಇರಲಿಲ್ಲ. ವೆಬ್‌ಸೈಟ್‌ನಲ್ಲಿ ಸದಸ್ಯರ ಫೋಟೋ ಸಹಿತ ಮಾಹಿತಿಯನ್ನು ಅಳವಡಿಸುವವರೆಗೆ ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಲು ಸ್ವಘೋಷಣಾ ಪತ್ರಕ್ಕಾಗಿ ಸಹಕಾರ ಸಂಘಗಳಿಗೆ ಬೇಟಿ ನೀಡಬೇಕಾಗುತ್ತಿತ್ತು. ಈ ತೊಂದರೆಯನ್ನು ತಪ್ಪಿಸಲು ಈ ಕೆಳಕಂಡ ಬದಲಾವಣೆಯನ್ನು ಮಾಡಲಾಗಿದೆ.

ಅ. 2013–14ನೇ ಸಾಲಿನಲ್ಲಿ ಹೊಸದಾಗಿ ನೋಂದಾಯಿಸುವವರೆಗೂ ಮತ್ತು ನವೀಕರಿಸುವವರೆಗೂ ಹೊಸ ಕಾರ್ಡುಗಳನ್ನು ಕೊಡಲಾಗುವುದು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಸದಸ್ಯರ ಎರಡು ಭಾವಚಿತ್ರಗಳನ್ನು ತಂದು ಕಛೇರಿ ಪ್ರತಿ ಮತ್ತು ಸದಸ್ಯರ ಪ್ರತಿಯ ಹಿಂಭಾಗದಲ್ಲಿ ಅರ್ಜಿ ಫಾರಂನಲ್ಲಿ ಕ್ರಮ ಸಂಖ್ಯೆ ಅನುಗುಣವಾಗಿ ಫೋಟೋಗಳನ್ನು ಅಂಟಿಸಿ ಭಾವಚಿತ್ರದ ಕೆಳಗೆ ಅವರ ಹೆಸರನ್ನು ಬರೆಯಬೇಕು.

19. 2013–14ನೇ ಸಾಲಿನಲ್ಲಿ ಹೊಸದಾಗಿ ನೋಂದಾವಣೆ/ನವೀಕರಣಗೊಂಡ/ ಸೇರ್ಪಡೆಯಾದ ಸದಸ್ಯರುಗಳಿಗೆ ಸಂಘವು ವಾರ್ಷಿಕ ವಂತಿಗೆ ಹಣ ಪಡೆದು ನೀಡಿರುವ ಸ್ವೀಕೃತಿ ರಶೀದಿಯನ್ನು ಮತ್ತು ಹೊಸ ನೋಂದಾವಣೆ ಫಾರಂನ ಸದಸ್ಯರಗಳ ಪ್ರತಿಯನ್ನು ಸದಸ್ಯರು 2013–14ನೇ ಸಾಲಿನ ಅಂತ್ಯದವರೆಗೆ ಸುರಕ್ಷಿತವಾಗಿ ಇಟ್ಟುಕೊಳ್ಳಬೇಕು ಮತ್ತು ಯೋಜನೆಯ ಸೌಲಭ್ಯವನ್ನು ಪಡೆಯುವ ಸಂದರ್ಭದಲ್ಲಿ ರಶೀದಿಯನ್ನು ಟ್ರಸ್ಟಿನಿಂದ ಅಂಗೀಕರಿಸಲ್ಪಟ್ಟ **ಆಸ್ಪತ್ರೆಗಳಿಗೆ ಕಡ್ಡಾಯವಾಗಿ ಹಾಜರುಪಡಿಸಬೇಕು** ಎಂಬ ತಿಳುವಳಿಕೆ ನೀಡತಕ್ಕದ್ದು.

20. 2008–09ರ ಸಾಲಿನಿಂದ ಸದಸ್ಯರುಗಳಿಗೆ ಯುನಿಕ್ ಐಡಿ ಸಂಖ್ಯೆಯನ್ನು ನೀಡಿ ಸದಸ್ಯರುಗಳ ಮಾಹಿತಿಯನ್ನು ಯಶಸ್ವಿನಿ ವೆಬ್‌ಸೈಟ್ www.yeshasvini.kar.nic.in/yeshsearch ನಲ್ಲಿ ಅಳವಡಿಸಲಾಗಿದೆ. 2010–11ನೇ ಸಾಲಿನಿಂದ ಹೊಸದಾಗಿ ನೋಂದಾವಣೆಯಾಗಿದ್ದ ಸದಸ್ಯರುಗಳು ಮತ್ತು ನವೀಕರಣಗೊಂಡಿದ್ದ ಸದಸ್ಯರುಗಳ ಮಾಹಿತಿಯನ್ನು ಕೂಡಾ ವೆಬ್‌ಸೈಟ್‌ನಲ್ಲಿ ಅಳವಡಿಸಲಾಗಿದೆ. ಆದ್ದರಿಂದ 2008–09 ಮತ್ತು ಅದಕ್ಕಿಂತ ಹಿಂದೆ ಯೋಜನೆಯ ಸದಸ್ಯರುಗಳಾಗಿದ್ದವರು ಮತ್ತು ನಂತರ ನೋಂದಾವಣೆ ನವೀಕರಿಸದೇ ಇದ್ದವರು, 2013–14ನೇ ಸಾಲಿನಲ್ಲಿ ಯೋಜನೆಯಡಿಯಲ್ಲಿ ಸೇರಲು ಬಯಸಿದಲ್ಲಿ, ಅಂತಹ ಸದಸ್ಯರುಗಳನ್ನು ನೋಂದಾಯಿಸಲು ಹೊಸ ನೋಂದಾವಣಿ ಫಾರಂಗಳನ್ನು ಉಪಯೋಗಿಸಬೇಕು.

21. ಪ್ರಾಥಮಿಕ ವ್ಯವಸಾಯ ಸೇವಾ ಸಹಕಾರ ಸಂಘಗಳು ತಮ್ಮ ಎಲ್ಲಾ ಸಾಲಗಾರರನ್ನು ಮನವೊಲಿಸಿ ಸಾಲಗಾರರು ಮತ್ತು ಅವರ ಕುಟುಂಬದ ಇತರೆ ಎಲ್ಲಾ ಸದಸ್ಯರನ್ನು ಯಶಸ್ವಿನಿ ಯೋಜನೆಯಡಿಯಲ್ಲಿ ಸ್ವ–ಪ್ರೇರಣೆಯಿಂದ ಸಾಲಗಾರರನ್ನು ಮನವೊಲಿಸಿ ಯಶಸ್ವಿನಿ ಯೋಜನೆಯಡಿಯಲ್ಲಿ ಸದಸ್ಯರನ್ನಾಗಿ ಮಾಡುತ್ತಿವೆ. ಇದೇ ರೀತಿ ಉಳಿದ ಎಲ್ಲಾ ಜಿಲ್ಲಾ ಕೇಂದ್ರ ಬ್ಯಾಂಕುಗಳು ಮತ್ತು ಇತರೆ ಗ್ರಾಮೀಣ ಸಹಕಾರ ಸಂಘಗಳು ತಮ್ಮ ಸಾಲಗಾರರ ಮನವೊಲಿಸಿ ಸಾಲಗಾರರು ಮತ್ತು ಅವರ ಕುಟುಂಬದ ಇತರೆ ಎಲ್ಲಾ ಸದಸ್ಯರನ್ನು ಯಶಸ್ವಿನಿ ಯೋಜನೆಯಡಿಯಲ್ಲಿ ನೋಂದಾಯಿಸಲು ಕ್ರಮ ಕೈಗೊಳ್ಳಲು ತಿಳಿಸಿದೆ.

22. ಅದೇ ರೀತಿ ಪಿಕಾರ್ಡ್ ಬ್ಯಾಂಕುಗಳೂ ಕೂಡ ದೀರ್ಘಾವಧಿ ಸಾಲ ವಿತರಣೆ/ ವಸೂಲಾತಿ ಸಂದರ್ಭದಲ್ಲಿ ಯಶಸ್ವಿನಿ ವಾರ್ಷಿಕ ವಂತಿಗೆ ಹಣವನ್ನು ಸಾಲಗಾರರ ಕುಟುಂಬದ ಅರ್ಹ ವ್ಯಕ್ತಿಗಳನ್ನು ಮನವೊಲಿಸಿ ಸದಸ್ಯರಾನ್ನಾಗಿ ಮಾಡಬೇಕು.

23. ಹಾಲು ಉತ್ಪಾದಕರ ಸಹಕಾರ ಸಂಘಗಳು, ಸಹಕಾರಿ ಸಕ್ಕರೆ ಕಾರ್ಖಾನೆಗಳು, ಸಹಕಾರಿ ನೂಲಿನ ಗಿರಣಿಗಳು ಇತ್ಯಾದಿ ಸಹಕಾರಿ ಸಂಘಗಳು ಅವರ ಸದಸ್ಯರಿಗೆ ಹಣ ಪಾವತಿ ಮಾಡುವಾಗ ಅಂತಹ ಸದಸ್ಯರ ಕುಟುಂಬದ ಅರ್ಹ ವ್ಯಕ್ತಿಗಳನ್ನು ಮವವೊಲಿಸಿ ಸದಸ್ಯರನ್ನಾಗಿ ನೋಂದಾವಣೆ ಮಾಡಬೇಕು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಯಾವುದೇ ಸದಸ್ಯನು ಸರ್ಕಾರಿ ನೌಕರನಾಗಿ ಅಥವಾ ಖಾಸಗಿ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಬೇರೆ ಯಾವುದೇ ಆರೋಗ್ಯ ವಿಮಾ ಯೋಜನೆಯ ಸೌಲಭ್ಯಕ್ಕೆ ಅರ್ಹನಾಗಿದ್ದಲ್ಲಿ, ಅಂತಹವರನ್ನು ಯಶಸ್ವಿನಿ

ಯೋಜನೆಯ ಫಲಾನುಭವಿಯಾಗಿ ನೋಂದಾಯಿಸಬಾರದು. ಆದಾಗ್ಯೂ ಯಾವುದೇ ಕಾರಣಕ್ಕಾಗಿ ನೋಂದಾಯಿಸಿದರೂ ಅವರು ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ.

24. ರಾಜ್ಯದಲ್ಲಿ ಕೆಲವು ಹಾಲು ಉತ್ಪಾದಕರ ಒಕ್ಕೂಟಗಳು ಮತ್ತು ಕೆಲವು ಸಹಕಾರ ಸಂಘ/ಸಂಸ್ಥೆಗಳು ಅವುಗಳ ಸದಸ್ಯರ ಯಶಸ್ವಿನಿ ವಂತಿಗೆಯಲ್ಲಿ ಭಾಗಶಃ ಹಣವನ್ನು ಸಹಕಾರ ಸಂಘದ ಸ್ವಂತ ಬಂಡವಾಳದಿಂದ ಭರಿಸುತ್ತಿವೆ. ಈ ಪದ್ಧತಿಯನ್ನು ರಾಜ್ಯದ ಎಲ್ಲಾ ಸಹಕಾರ ಸಂಘ ಸಂಸ್ಥೆಗಳೂ ಕೂಡ ಅನುಸರಿಸುವಂತೆ ಪ್ರೋತ್ಸಾಹಿಸಲು ಸೂಚಿಸಲಾಗಿದೆ.

25. 2013–14ನೇ ಸಾಲಿನಲ್ಲಿ ಹೊಸದಾಗಿ/ನವೀಕರಣ ಮಾಡಿಕೊಳ್ಳುವ ಸದಸ್ಯರುಗಳು ಸುಳ್ಳು ಮಾಹಿತಿ ಮತ್ತು ಅಕ್ರಮವಾಗಿ ಸದಸ್ಯರ ಅಥವಾ ಸಹಕಾರ ಸಂಘಗಳ ತಪ್ಪಿನಿಂದಾಗಿ ಆಗಿದ್ದರೆ ಗೊತ್ತಿದ್ದು ಅಥವಾ ಗೊತ್ತಿಲ್ಲದೆಯೋ ನೋಂದಾವಣೆ ಹೊಂದಿದ್ದರೆ ಅಂತಹ ವ್ಯಕ್ತಿಗಳು ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಲು ಅನರ್ಹರು ಹಾಗೂ ಪಾವತಿಸಿದ ವಂತಿಗೆ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೆಯೇ ಅಂತಹ ಫಲಾನುಭವಿಗಳ ಯಶಸ್ವಿನಿ ಯೋಜನೆಯ ಸದಸ್ಯತ್ವ ತಂತಾನೇ ರದ್ದುಗೊಳ್ಳುತ್ತದೆ, ಪ್ರತ್ಯೇಕ ರದ್ದತಿ ಆದೇಶದ ಅವಶ್ಯಕತೆ ಇರುವುದಿಲ್ಲ.

26. ಯಶಸ್ವಿನಿ ಯೋಜನೆಯಡಿಯಲ್ಲಿನ ಮಾಹಿತಿ–ಯನ್ನೊಳಗೊಂಡ ಬ್ರೋಚರಗಳನ್ನು ಸಹಕಾರ ಸಂಘಗಳು 2013–14ನೇ ಸಾಲಿಗೆ ಯೋಜನೆಯಡಿಯಲ್ಲಿ ಹೊಸದಾಗಿ ನೋಂದಾಯಿಸುವ/ ನವೀಕರಣಗೊಳ್ಳುವ ಫಲಾನುಭವಿಗಳ ಯಶಸ್ವಿನಿ ಕಾರ್ಡ್ ಹೊಂದಿರುವ ಪ್ರಧಾನ ಅರ್ಜಿದಾರರಿಗೆ ಮಾತ್ರ ಈ ಬ್ರೋಚರಗಳನ್ನು ನೀಡಿ, ಬ್ರೋಚರವನ್ನು ಸ್ವೀಕರಿಸಿರುವ ಬಗ್ಗೆ ಸ್ವೀಕೃತಿಯನ್ನು ಪಡೆದು ಸಹಕಾರ ಸಂಘಗಳು ಇಟ್ಟುಕೊಂಡಿರಬೇಕು.

27. 2013–14ನೇ ಸಾಲಿನಲ್ಲಿ ಕೆಲವು ಸದಸ್ಯರು ಯಶಸ್ವಿನಿ ವಂತಿಗೆ ಹಣವನ್ನು ಸಹಕಾರ ಸಂಘಕ್ಕೆ ಪಾವತಿ ಮಾಡಿ, ಫೋಟೋ ಇತ್ಯಾದಿ ಅವಶ್ಯಕ ಮಾಹಿತಿಯನ್ನು ಒದಗಿಸದೆ ಇದ್ದರೆ, ಈ ಕಾರಣದಿಂದ ಸಹಕಾರ ಸಂಘದಲ್ಲಿ ಬಾಕಿ ಉಳಿದ ವಂತಿಗೆಯ ಮೊತ್ತವನ್ನು ಸಹಕಾರ ಸಂಘವು ಯಶಸ್ವಿನಿ ಟ್ರಸ್ಟಿಗೆ ನೀಡಿದ ದೇಣಿಗೆಯೆಂದು ಪರಿಗಣಿಸಿ, ಟ್ರಸ್ಟ್‌ನ ಖಾತೆಗೆ ಜಮಾಮಾಡತಕ್ಕದ್ದು.

28. 2013–14ನೇ ಸಾಲಿನ ಯಶಸ್ವಿನಿ ಯೋಜನೆಯ ಅವಧಿಯು ದಿನಾಂಕ: 01.08.2013ರಿಂದ ಪ್ರಾರಂಭವಾಗಿ 31.07.2014 ಮುಗಿಯುತ್ತದೆ. ಆದ ಕಾರಣ ಈ ಸುತ್ತೋಲೆ ಅನ್ವಯ **ಹೊಸದಾಗಿ ನೋಂದಾವಣೆಯಾಗುವ/ಸೇರ್ಪಡೆಯಾಗುವ ಫಲಾನುಭವಿಗಳು ಯಶಸ್ವಿನಿ ಯೋಜನೆಯ ಸೌಲಭ್ಯವನ್ನು ದಿನಾಂಕ: 01.08.2013 ರಿಂದ ಜಾರಿಗೆ ಬರುವಂತೆ ಮಾತ್ರ ಪಡೆಯಲು ಅರ್ಹರಾಗುತ್ತಾರೆ**. ಆದ್ದರಿಂದ ಸಹಕಾರ ಸಂಘಗಳು ನೀಡುವ ವಂತಿಗೆ ಹಣ ಸ್ವೀಕೃತಿ ರಶೀದಿ/ಫಲಾನುಭವಿಗೆ ನೀಡುವ ನೋಂದಾವಣೆ ನಮೂನೆ ಭಾಗದ ಪ್ರತಿಯಲ್ಲಿ ಈ ಮೇಲಿನ ಅಂಶವನ್ನು ಸ್ಪಷ್ಟವಾಗಿ ಬರೆಯಬೇಕು ಮತ್ತು ತಿಳುವಳಿಕೆಯನ್ನು ಕೂಡ ಫಲಾನುಭವಿಗೆ ನೀಡಬೇಕು.

ಇತರೆ ವಿಷಯಗಳ ಬಗ್ಗೆ ಈ ಮೊದಲು ನೀಡಲಾದ ಸುತ್ತೋಲೆಗಳಲ್ಲಿ ಮೇಲಿನ ನಿಯಮಗಳಿಗೆ ವಿರುದ್ಧವಲ್ಲದ ಮಾರ್ಗಸೂಚಿ ನಿಯಮಗಳನ್ನು ಪಾಲಿಸುವಂತೆ ಸೂಚಿಸಲಾಗಿದೆ. ಯಶಸ್ವಿನಿ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ತಿಳುವಳಿಕೆ ನೀಡಲು ಆಯಾ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ಅವರ ವ್ಯಾಪ್ತಿಯ ಇಲಾಖಾಧಿಕಾರಿಗಳ, ಜಿಲ್ಲಾಸಹಕಾರ ಬ್ಯಾಂಕ್‌ಗಳ, ಹಾಲುಉತ್ಪಾದಕರ ಒಕ್ಕೂಟಗಳ ಮತ್ತು ಇತರೆ ಪ್ರಮುಖ ಸಹಕಾರ ಸಂಘ / ಸಂಸ್ಥೆಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಸಭೆಯನ್ನು ಪ್ರಾಂತ ಮಟ್ಟದಲ್ಲಿ ನಿರ್ವಹಿಸಲು ಸೂಚಿಸಿದೆ. ನಂತರ ದಿ:15.07.2013ರೊಳಗೆ ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರುಗಳು ಅವರ ಜಿಲ್ಲೆಯ ಎಲ್ಲಾ ಗ್ರಾಮೀಣ ಸಹಕಾರ ಸಂಘಗಳ ಅಧ್ಯಕ್ಷರ ಮತ್ತು ಕಾರ್ಯದರ್ಶಿಯವರ, ಸ್ತ್ರೀಶಕ್ತಿ ಗುಂಪು/ ಸ್ವಸಹಾಯ ಗುಂಪು ಮತ್ತು ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಸಭೆ ಕರೆದು ಕಾರ್ಯಾಗಾರ ಏರ್ಪಡಿಸಿ ಯೋಜನೆಯ ಮಾರ್ಗಸೂಚಿ ನಿಯಮಗಳು, ಇತಿಮಿತಿಗಳು ಮತ್ತು ಯೋಜನೆಯಿಂದ ಸೌಲಭ್ಯ ಪಡೆಯುವವರ ಬಗ್ಗೆ ಮಾಹಿತಿಯನ್ನು ನೀಡಿ, ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಸಹಕಾರ ಸಂಘಗಳ ನಿಬಂಧಕರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ.

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR.727**
**SC.25**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜೆ.ಎಂ. ಕಾಲಿಮಿರ್ಚಿ, ಪಿ.ಎಸ್.ಐ.,(ಕಾ & ಸು) ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2ಎ/ಪಿಆರ್/75/2012 (ಆ.ಪು. ಸಂಖ್ಯೆ: 527/2012) ದಿನಾಂಕ: 04–7–2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/97/ಉವ/2012 ದಿನಾಂಕ: 10–9–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 08–10–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)39/2012–13 ದಿನಾಂಕ: 29–12–2012

**ಪ್ರಸ್ತಾವನೆ:**

ಶ್ರೀ ಜೆ.ಎಂ. ಕಾಲಿಮಿರ್ಚಿ, ಪಿ.ಎಸ್.ಐ., ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾವಿ, ಇವರು ಮಾಳಮಾರುತಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಆಪಾದಿತ ಪೊಲೀಸ್ ಅಧಿಕಾರಿಯಾದ ನೀವು ಮಾಳಮಾರುತಿ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಪಡಿತರ ಚೀಟಿಗೆ ವಿತರಿಸುವ ಸೀಮೆಎಣ್ಣೆಯನ್ನು ಅಕ್ರಮವಾಗಿ ಮಾರಾಟ ಮಾಡುವ ಉದ್ದೇಶದಿಂದ ಬೇರೆ ಕಡೆ ಸಾಗಿಸುತ್ತಿದ್ದು ಇಂತಹ ಅಕ್ರಮ ಮಾರಾಟ ಮಾಡುವವರ ಬಗ್ಗೆ ಪತ್ತೆಹಚ್ಚಲು ನಿಮ್ಮ ಅಧೀನ ಸಿಬ್ಬಂದಿಯವರಿಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡಿ ಮೇಲ್ವಿಚಾರಣೆಯನ್ನು ಕೈಗೊಳ್ಳುವಲ್ಲಿ ಹಾಗೂ ನೀವೂ ಸಹ ಇಂತಹ ಚಟುವಟಿಕೆಗಳನ್ನು ಪತ್ತೆಹಚ್ಚಿ ಸೂಕ್ತ ಕ್ರಮ ಕೈಗೊಳ್ಳುವಲ್ಲಿ ಸಂಪೂರ್ಣ ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದರಿತನ ಪ್ರದರ್ಶಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 04–7–2012ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಲಾದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10–9–2012ರ ಆದೇಶದಲ್ಲಿ ಮೇಲ್ಮನವಿಯನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿಯು ಮಾರ್ಪಡಿಸಿ ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 110 ಪೊಸಿಅ 2012 ಬೆಂಗಳೂರು, ದಿನಾಂಕ: 16.07.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ಎಂ. ಕಾಲಿಮಿರ್ಚಿ, ಪಿ.ಎಸ್.ಐ.,(ಕಾ & ಸು) ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.792**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್. ಬಸವನಗೌಡ, ಪಿ.ಸಿ.–539, 7ನೇ ಪಡೆ, ಕೆ.ಎಸ್.ಆರ್.ಪಿ, ಮಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, ಇವರ ಆದೇಶ ಸಂಖ್ಯೆ: 04/ಇವಿ.6/2011–12 (ಓ.ಬಿ. ಸಂಖ್ಯೆ: 141/2011–12) ದಿನಾಂಕ: 13–3–2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(01)/2012–13 ದಿನಾಂಕ: 28–6–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22–11–2012
4. 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)57/2012–13 ದಿನಾಂಕ: 22–02–2013

**ಪ್ರಸ್ತಾವನೆ:**

ಶ್ರೀ ಆರ್. ಬಸವನಗೌಡ, ಪಿ.ಸಿ.–539, ಇವರು 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ತಾತ್ಕಾಲಿಕ ಕಮಾಂಡೊ ತರಬೇತಿಗೆ ತೆರಳು ನಿರಾಕರಿಸಿ, ಕರ್ತವ್ಯದಲ್ಲಿ ಅಶಿಸ್ತು ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

i) ಶ್ರೀ ಬಸವನಗೌಡ, ಆರ್., ಪಿ.ಸಿ., ಸಂ: 539, 'ಎಫ್' ದಳ ಕರಾಮೀಪೊ, 7ನೇ ಪಡೆ, ಮಂಗಳೂರು ಆದ ನೀವು ನೇಮಕಗೊಂಡ ತಾತ್ಕಾಲಿಕ ಕಮಾಂಡೋ ತರಬೇತಿಗೆ ತೆರಳಲು ನಿರಾಕರಿಸಿ ಪಡೆಯ ಕಛೇರಿ ಹಾಗೂ ಕವಾಯತು ಮೈದಾನದಲ್ಲಿ ದುರ್ನಡತೆ, ಕರ್ತವ್ಯ ನಿರ್ಲಕ್ಷ್ಯತನ, ಬೇಜವಾಬ್ದಾರಿ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ.

ii) ನೀವು ದಿ: 06–12–2010 ರಂದು ಸಮಯ 15.30ಕ್ಕೆ ಪಡೆಯ ಹಾಜರಾತಿ ಪಡೆಯುವ ಸಮಯದಲ್ಲಿ ಪಡೆಯ ಶ್ರೀ ಎ.ಕೆ. ಶಾಂತಪ್ಪ, ಎ.ಆರ್.ಎಸ್.ಐ. (ಬೆಟಾಲಿಯನ್ ಮೇಜರ್) ರವರೊಂದಿಗೆ ಅಶಿಸ್ತಿನಿಂದ ವರ್ತಿಸಿ ಅಶಿಸ್ತು ದುರ್ನಡತೆ, ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

iii) ಅಮಾನತ್ತಿನಲ್ಲಿದ್ದ ನೀವು ಕಿಟ್ ಸಾಮಗ್ರಿಗಳನ್ನು ದಳದ ಉಗ್ರಾಣಕ್ಕೆ ಜಮಾ ಮಡಲು ನಿರಾಕರಿಸಿ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

iv) ದಿನಾಂಕ: 19–12–2010 ರಂದು ಅಮಾನತ್ತಿನಲ್ಲಿದ್ದ ನೀವು ಪಹರೆ ಕರ್ತವ್ಯದಲ್ಲಿದ್ದ ಸಿಬ್ಬಂದಿಯವರೊಂದಿಗೆ ಹಾಗೂ ಕರ್ತವ್ಯ ಅಧಿಕಾರಿಯವರೊಂದಿಗೆ ಉದ್ಧಟತನದಿಂದ ವರ್ತಿಸಿ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 13–3–2012ರ ಆದೇಶದಲ್ಲಿ ಅರ್ಜಿದಾರರ ಮೂಲ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 3 (ಮೂರು) ವರ್ಷಗಳ ಕಾಲ ಇಳಿಸಲಾಗಿದೆ ಹಾಗೂ ಸದರಿಯವರನ್ನು ದಿನಾಂಕ: 07–12–10 ರಿಂದ 16–02–11ರ ವರೆಗೆ 72 ದಿನಗಳ ಅಮಾನತ್ತಿನಲ್ಲಿರಿಸಿದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–6–2012ರ ಆದೇಶದಲ್ಲಿ ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅಶಿಸ್ತು ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 135 ಪೊಸಿಅ 2012 ಬೆಂಗಳೂರು, ದಿನಾಂಕ: 15.07.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಬಸವನಗೌಡ, ಪಿ.ಸಿ.–539, 7ನೇ ಪಡೆ, ಕೆ.ಎಸ್.ಆರ್.ಪಿ, ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.794**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ.ಎಂ. ಕರ್ಜಗಿ, ಸಿ.ಪಿ.ಸಿ.,–1270, ಹಾನಗಲ್ ಪೊಲೀಸ್ ಠಾಣೆ, ಹಾಲಿ ಶಿಗ್ಗಾಂವ್ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ/5/2008 (ಓ.ಬಿ. ಸಂಖ್ಯೆ:417/2009) ದಿನಾಂಕ: 09–11–2009
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ, ಇವರ ಆದೇಶ ಸಂಖ್ಯೆ: ಅಪೀಲು/93/ಉವ/2011/ ಬೆಳಗಾವಿ ದಿನಾಂಕ: 22–7–2011
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 20–10–2011
4. 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)49/2011–12 ದಿನಾಂಕ: 15–12–2012

**ಪ್ರಸ್ತಾವನೆ:**

ಶ್ರೀ ಸಿ.ಎಂ. ಕರ್ಜಗಿ, ಸಿ.ಪಿ.ಸಿ.,–1270, ಹಾನಗಲ್ ಪೊಲೀಸ್ ಠಾಣೆ, ಹಾಲಿ ಶಿಗ್ಗಾಂವ್ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಕಾನೂನು ಬಾಹಿರವಾಗಿ ಅರಣ್ಯದಲ್ಲಿ ಅಕ್ರಮ ಸಾಗುವಾನಿ ಕಟ್ಟಿಗೆ ಕಳ್ಳಸಾಗಣೆ ಮಾಡಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

" ನೀವು ಹಾನಗಲ್ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಅಂತ ಕರ್ತವ್ಯ ನಿರ್ವಹಿಸುತ್ತಿದ್ದಾಗ ನೀವು ದಿ: 16,17–10–2007ರ ನಡುವಿನ ಕರ್ತವ್ಯದ ಬಿಡುವಿನ ವೇಳೆಯಲ್ಲಿ ಹಾನಗಲ್ ಠಾಣೆಯ ಎ.ಎಸ್.ಐ. ಶ್ರೀ ಎಸ್.ಎಫ್. ಮುಗಳಿ ಮತ್ತು ಸಿ.ಪಿ.ಸಿ.–1030, ಶ್ರೀ ಎನ್.ಟಿ. ಬೆಟಗೇರಿ, ಹಾನಗಲ್ ಪೊಲೀಸ್ ಠಾಣೆ ಹಾಗೂ ಇನ್ನಿತರೆ ನಾಲ್ಕು ಜನ ಖಾಸಗಿ ವ್ಯಕ್ತಿಗಳೊಂದಿಗೆ ಕಾತೂರು ಅರಣ್ಯ ವಲಯದ ಓರಲಗಿ ಗ್ರಾಮದ ಫಾರೆಸ್ಟ್ ಸರ್ವೆ ನಂ.138ರಲ್ಲಿ ಸಾಗುವಾನಿ ಜಾತಿಯ 07 ಕಟ್ಟಿಗೆಯ ತುಂಡುಗಳನ್ನು ಮಿನಿ ಲಾರಿ ನಂ.ಕೆಎ 31/874ನೇದ್ದರ ವಾಹನದಲ್ಲಿ ಯಾವುದೇ ಅರಣ್ಯ ಇಲಾಖೆಯಿಂದ ಪರವಾನಿಗೆ ಇಲ್ಲದೆ ಹೇರಿಕೊಂಡು ಸಾಗಾಟ ಮಾಡುತ್ತಿರುವಾಗ ಅರಣ್ಯ ಇಲಾಖೆಯ ಅಧಿಕಾರಿ ಹಾಗೂ ಸಿಬ್ಬಂದಿಯವರು ನಿಮಗೆ ದಿ: 17–10–2007ರ ಬೆಳಗ್ಗಿನ 02–00 ಗಂಟೆಗೆ ದಾಳಿ ನಡೆಸಿ ಹಿಡಿದು ನಿಮ್ಮನ್ನು ಬಂಧಿಸಿ ನಮೂದ ಮಿನಿ ಲಾರಿ, ಮೋಟಾರ್ ಸೈಕಲ್ ಮತ್ತು ಕಟ್ಟಿಗೆಯ ತುಂಡುಗಳನ್ನು ವಶಕ್ಕೆ ತೆಗೆದುಕೊಂಡು, ನಿಮ್ಮೆಲ್ಲರ ವಿರುದ್ದ ಅರಣ್ಯ ಮೊಕದ್ದಮೆ ಸಂಖ್ಯೆ:04/07 ನೇದ್ದರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿದ್ದು, ಅದೇ. ಅಲ್ಲದೆ ನಿಮಗೆ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು ಅದೇ.

ನೀವು ಒಬ್ಬ ಶಿಸ್ತಿನ ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಅಂತಾ ಕರ್ತವ್ಯ ನಿರ್ವಹಿಸುತ್ತಿರುವ ಜವಾಬ್ದಾರಿಯ ಅಧಿಕಾರಿಯಾಗಿ ಕಾನೂನು ಜ್ಞಾನ ಉಳ್ಳವರಾಗಿದ್ದರೂ ಸಹಿತ, ಅರಣ್ಯ ಇಲಾಖೆಯ ಯಾವುದೇ ಪರವಾನಿಗೆ ಪಡೆಯದೆ ಮೇಲ್ಕಂಡ ಸರ್ಕಾರಿ ಅರಣ್ಯ ಪ್ರದೇಶದಲ್ಲಿಂದ ಅಕ್ರಮವಾಗಿ ಸಾಗುವಾನಿ ಕಟ್ಟಿಗೆ 07 ತುಂಡುಗಳನ್ನು ಕಡಿದುಕೊಂಡು ಮೇಲ್ಕಂಡ ವಾಹನದಲ್ಲಿ ಸಾಗಾಟ ಮಾಡುತ್ತಿರುವಾಗ ಅರಣ್ಯ ಅಧಿಕಾರಿ ಹಾಗೂ ಸಿಬ್ಬಂದಿಯವರ ಕೈಯಲ್ಲಿ ಸಿಕ್ಕು ಪೊಲೀಸ್ ಇಲಾಖೆಗೆ ಕಳಂಕ ತರುವ ಘೋರ ಕೃತ್ಯ ಎಸಗಿದ್ದೀರಿ, ಶಿಸ್ತು ಪಾಲನಾ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದರೂ, ಶಿಸ್ತು ಪಾಲನೆ ಮಾಡದೆ ಕಾನೂನು ಬಾಹಿರವಾಗಿ ಅರಣ್ಯದಲ್ಲಿ ಅಕ್ರಮ ಸಾಗುವಾನಿ ಕಟ್ಟಿಗೆ ಕಳ್ಳ ಸಾಗಾಣಿಕೆ ಮಾಡಿ ದುರ್ನಡತೆ ಪ್ರದರ್ಶಿಸಿದ್ದಲ್ಲದೇ ಇಲಾಖೆಯ ಘನತೆಗೆ ಧಕ್ಕೆಯನ್ನುಂಟು ಮಾಡಿರುವಿರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 09–11–2009ರ ಆದೇಶದಲ್ಲಿ ಅರ್ಜಿದಾರರ ಮುಂಬರುವ 3 (ಮೂರು) ವಾರ್ಷಿಕ ವೇತನ ಬಡ್ತಿಗಳನ್ನು (with cummulative effect) ನಂತರದ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಮುಂದೂಡುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿ ದಿನಾಂಕ: 17–10–2007 ರಿಂದ 31–01–2008 ರವರೆಗೆ 107 ದಿನಗಳ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22–7–2011ರ ಆದೇಶದಲ್ಲಿ ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 116 ಪೊಸಿಅ 2011 ಬೆಂಗಳೂರು, ದಿನಾಂಕ: 15.07.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎಂ. ಕರ್ಜಗಿ, ಸಿ.ಪಿ.ಸಿ.,–1270, ಹಾನಗಲ್ ಪೊಲೀಸ್ ಠಾಣೆ, ಹಾಲಿ ಶಿಗ್ಗಾಂವ್ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.795

SC.30

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ರಾಜಭವನದಲ್ಲಿನ ಒಂದು ಶಾಖಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಗೌರವಾನ್ವಿತ ರಾಜ್ಯಪಾಲರ ಕಾರ್ಯದರ್ಶಿಯವರ ಅರೆ ಸರ್ಕಾರಿ ಪತ್ರ ಸಂಖ್ಯೆ ಜಿಎಸ್ 10 ಇಎಸ್‌ಟಿ 2007; ದಿನಾಂಕ: 21/01/2013.

**ಪ್ರಸ್ತಾವನೆ:**

ಮೇಲೆ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಗೌರವಾನ್ವಿತ ರಾಜ್ಯಪಾಲರ ಕಾರ್ಯದರ್ಶಿಯವರು ರಾಜಭವನದಲ್ಲಿನ ಒಂದು ಶಾಖಾಧಿಕಾರಿ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವಂತೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 76 ಸಅಸೇ 2013 ಬೆಂಗಳೂರು, ದಿನಾಂಕ: 16ನೇ ಮೇ 2013**

ಗೌರವಾನ್ವಿತ ರಾಜ್ಯಪಾಲರ ಸಚಿವಾಲಯದಲ್ಲಿನ ಒಂದು ಶಾಖಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಯಾವುದು ಮೊದಲೋ ಅಲ್ಲಿಯವರೆಗೆ ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 135 ಸೇ–3/13, ದಿನಾಂಕ 16.02.2013ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ(ಸೇವೆಗಳು–6)

**PR.757**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿನ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1). ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 272 ಸಅಸೇ 2012; ದಿನಾಂಕ:05–06–2012.

2). ಸರ್ಕಾರದ ಕಾರ್ಯದರ್ಶಿ (ಆಡಳಿತ ಸುಧಾರಣೆ), ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ರವರ ಅ.ಟಿ. ಸಂಖ್ಯೆ: ಸಿಆಸುಇ/140/ಸಕಾ(ಆಸು)/2013.

**ಪ್ರಸ್ತಾವನೆ:**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿನ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ವರ್ಷದಿಂದ ವರ್ಷಕ್ಕೆ ಮುಂದುವರೆಸಿಕೊಂಡು ಬಂದಿದ್ದು, ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 01–04–2011 ರಿಂದ 31–03–2013 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು) ವಿಭಾಗದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ ಅನುಷ್ಠಾನವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲಾಗುತ್ತಿದ್ದು, ಇಲಾಖೆಗಳ ಕಾರ್ಯಾಧ್ಯಯನ, ತಪಾಸಣೆ, ಅಧಿಕಾರಿ ಸಿಬ್ಬಂದಿಗಳನ್ನು ತರಬೇತಿಗೆ ನಿಯೋಜಿಸುವ ವಿಷಯಗಳನ್ನು ನಿರ್ವಹಿಸಲಾಗುತ್ತಿದೆ. ಆದ್ದರಿಂದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:01–04–2013 ರಿಂದ ಖಾಯಂ ಆಗಿ ಮುಂದುವರಿಸಲು ಕೋರಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ(ಆಪ್ತ ಕಾರ್ಯದರ್ಶಿ ಗ್ರೇಡ್–1/ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ) | 1 |
| 2 | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 2 |
| 3 | ಭಾಷಾಂತರಕಾರರು(ಶಾಖಾಧಿಕಾರಿ/ಹಿರಿಯ ಸಹಾಯಕರು) | 1 |
| 4 | ಸಹಾಯಕರು/ಕಿರಿಯ ಸಹಾಯಕರು | 1 |
| 5 | ವಾಹನ ಚಾಲಕರು | 1 |
| 6 | ಗ್ರೂಪ್–ಡಿ ಹುದ್ದೆ (ಜಮೇದಾರ/ದಲಾಯತ) | 2 |

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 251 ಸಅಸೇ 2013 ಬೆಂಗಳೂರು, ದಿನಾಂಕ: 16ನೇ ಮೇ 2013**

ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಈ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:01–04–2013 ರಿಂದ ದಿನಾಂಕ:31–03–2014 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ(ಆಪ್ತ ಕಾರ್ಯದರ್ಶಿ ಗ್ರೇಡ್–1/ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ) | 1 |
| 2 | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 2 |
| 3 | ಭಾಷಾಂತರಕಾರರು(ಶಾಖಾಧಿಕಾರಿ/ಹಿರಿಯ ಸಹಾಯಕರು) | 1 |
| 4 | ಸಹಾಯಕರು/ಕಿರಿಯ ಸಹಾಯಕರು | 1 |
| 5 | ವಾಹನ ಚಾಲಕರು | 1 |
| 6 | ಗ್ರೂಪ್–ಡಿ ಹುದ್ದೆ (ಜಮೇದಾರ/ದಲಾಯತ) | 2 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ(ಸೇವೆಗಳು–6)

**PR.760**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಆಪ್ತ ಕಾರ್ಯದರ್ಶಿ ಗ್ರೇಡ್–I ಹುದ್ದೆಯ ವೃಂದಬಲವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ:28–08–2012 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಶೀಘ್ರಲಿಪಿಗಾರರ ವೃಂದದ ಅಧಿಕಾರಿ/ನೌಕರರುಗಳಿಗೆ ಬಡ್ತಿಯ ಅವಕಾಶಗಳನ್ನು ಕಲ್ಪಿಸಲು ದಿನಾಂಕ:15–06–1997ರ ಆದೇಶದಲ್ಲಿ ಪ್ರತ್ಯೇಕ ಮಾರ್ಗ ರಚಿಸಿದಾಗ ಕರ್ನಾಟಕ ಸರ್ಕಾರ ಸಚಿವಾಲಯದ ಇಲಾಖೆಗಳ ಸಂಖ್ಯೆ ಕಡಿಮೆಯಿತ್ತು. ನಂತರದ ದಿನಗಳಲ್ಲಿ ಆಡಳಿತಾತ್ಮಕ ಕಾರಣಗಳಿಗಾಗಿ ಕೆಲವು ಹೊಸ ಇಲಾಖೆಗಳನ್ನು ಸೃಜಿಸಿದ್ದು, ಇನ್ನೂ ಕೆಲವು ಇಲಾಖೆಗಳನ್ನು ಪ್ರತ್ಯೇಕಿಸಿ ಆದೇಶ ಹೊರಡಿಸಲಾಗಿದೆ. ಹೀಗಾಗಿ ಶೀಘ್ರಲಿಪಿಗಾರರ ವೃಂದದಿಂದ ಗ್ರೂಪ್–ಎ ವೃಂದದಲ್ಲಿ ಸೃಜಿಸಿರುವ ವೃಂದಬಲ ಕಡಿಮೆ ಇರುವುದನ್ನು ಗಮನಿಸಿದ ಸಮಿತಿಯು ಪ್ರತಿಯೊಂದು ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ಆಪ್ತ ಶಾಖೆಯಲ್ಲಿ ಕನಿಷ್ಠ ಒಬ್ಬ ಗ್ರೂಪ್–ಎ ವೃಂದದ ಆಪ್ತ ಕಾರ್ಯದರ್ಶಿ, ಗ್ರೇಡ್–1 ಅಥವಾ ಗ್ರೇಡ್–2 ಅಧಿಕಾರಿಯನ್ನು ನೇಮಿಸುವುದು ಕಡ್ಡಾಯವೆಂದು ಪರಿಗಣಿಸಿರುತ್ತದೆ. ಈ ಬಗ್ಗೆ ಆರ್ಥಿಕ ಇಲಾಖೆಯು ಶೀಘ್ರಲಿಪಿಗಾರರ ವೃಂದದಲ್ಲಿನ ಆಪ್ತ ಕಾರ್ಯದರ್ಶಿ ಗ್ರೇಡ್–I ವೃಂದಬಲ ಪ್ರಸ್ತುತ 18 ಆಗಿದ್ದು, ಇದನ್ನು 23 ಕ್ಕೆ ಹೆಚ್ಚಿಸಲು ಸಹಮತಿ ನೀಡಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 400 ಸಅಸೇ 2011(ಭಾ) ಬೆಂಗಳೂರು, ದಿನಾಂಕ: 22ನೇ ಮೇ 2013**

ಕರ್ನಾಟಕ ಸರ್ಕಾರ ಸಚಿವಾಲಯದ ಆಪ್ತ ಕಾರ್ಯದರ್ಶಿ ಗ್ರೇಡ್–I ವೃಂದಬಲವು ಪ್ರಸ್ತುತ 18 ಆಗಿದ್ದು, ಇದನ್ನು 23 ಕ್ಕೆ ಹೆಚ್ಚಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 233 ವೆಚ್ಚ–12/2013; ದಿನಾಂಕ:30.04.2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ(ಸೇವೆಗಳು–6)

**PR.755**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಇಎಂ 96; ದಿನಾಂಕ:19.02.1997.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 03 ಸಸಿವಿ 98; ದಿನಾಂಕ: 24.04.1998..
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 93 ಸಅಸೇ 2012; ದಿನಾಂಕ: 29.03.2012.
4. ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಆಇ 38 ಯೋಮೇಘ 2013.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾಗಿರುವ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಈ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಯೋಜನಾ ಮೇಲ್ವಿಚಾರಣಾ ಘಟಕವನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಿಕೊಂಡು ಬರಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 01 | ಜಂಟಿ/ಉಪ ಕಾರ್ಯದರ್ಶಿ | 01 |
| 02 | ಶೀಘ್ರಲಿಪಿಗಾರರು | 01 |
| 03 | ಕಿರಿಯ ಸಹಾಯಕರು | 01 |
| 04 | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಲೆಕ್ಕ ಪತ್ರ ಇಲಾಖೆಯಿಂದ ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 01 |
| 05 | ಸಹಾಯಕ ನಿರ್ದೇಶಕರು / ಉಪ ನಿರ್ದೇಶಕರು (ವೇತನ ಶ್ರೇಣಿ ರಹಿತ ಹುದ್ದೆ) | 01 |
| 06 | ಪ್ರೋಗ್ರಾಮರ್ | 01 |
| 07 | ಶೀಘ್ರಲಿಪಿಗಾರರು/ಡಾಟಾ ಎಂಟ್ರಿ ಆಪರೇಟರ್ | 01 |

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 08 | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು*/ ಸಹ ನಿರ್ದೇಶಕರು/ ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ.(ವೇತನ ಶ್ರೇಣಿ ರಹಿತ ಹುದ್ದೆ) | 02 |
| 09 | ಶಾಖಾಧಿಕಾರಿ | 01 |
| 10 | ಹಿರಿಯ ಸಹಾಯಕರು | 01 |
| 11 | ಶೀಘ್ರಲಿಪಿಗಾರರು | 01 |
| 12 | ಬೆರಳಚ್ಚುಗಾರರು | 01 |
| 13 | ಟೆಕ್ನಿಷಿಯನ್ (ಗ್ರೂಪ್–ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 01 |
| 14 | ವಾಹನ ಚಾಲಕ | 01 |
| 15 | ಡಾಟಾ ಎಂಟ್ರಿ ಆಪರೇಟರ್ | 01 |
| 16 | ಹಿರಿಯ ಸಹಾಯಕ | 01 |
| 17 | ಸಹಾಯಕ | 01 |
| 18 | ಕಿರಿಯ ಸಹಾಯಕ | 01 |
| | **ಒಟ್ಟು** | **19 ಹುದ್ದೆಗಳು** |

ಮೇಲೆ ಕ್ರಮ ಸಂಖ್ಯೆ(3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿನ ಮೇಲ್ವಿಚಾರಣಾ ಘಟಕದಲ್ಲಿನ ಎಲ್ಲಾ ಹುದ್ದೆಗಳನ್ನು ದಿನಾಂಕ:19.02.2012 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ. ಸದರಿ ಹುದ್ದೆಗಳ ಅವಧಿಯ ಮುಂದುವರಿಕೆಯು ದಿನಾಂಕ:18.02.2013 ರಂದು ಮುಕ್ತಾಯವಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಕಡತದಲ್ಲಿ ಆರ್ಥಿಕ ಇಲಾಖೆಯು ಈ ತಾತ್ಕಾಲಿಕ ಹುದ್ದೆಗಳನ್ನು 5 ವರ್ಷಗಳಿಗಿಂತ ಮೇಲ್ಪಟ್ಟ ಅವಧಿಗೆ ಮುಂದುವರೆಸಲಾಗಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಆಇ 58 ಎಸ್ಆರ್ಎಸ್ 1979; ದಿನಾಂಕ:27.09.1979 ರನ್ವಯ ಈ ಹುದ್ದೆಗಳನ್ನು ಶಾಶ್ವತವಾಗಿ ಮುಂದುವರಿಸುವಂತೆ ಹಾಗೂ ಸದ್ಯಕ್ಕೆ ಸದರಿ ಹುದ್ದೆಗಳನ್ನು ದಿನಾಂಕ:19.02.2013 ರಿಂದ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸುವಂತೆ ಆರ್ಥಿಕ ಇಲಾಖೆಯು ಸಿ.ಆ.ಸು. ಇಲಾಖೆಯನ್ನು ಕೋರಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 178 ಸಅಸೇ 2013, ಬೆಂಗಳೂರು, ದಿನಾಂಕ: 22ನೇ ಮೇ 2013**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:19.02.2013 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 01 | ಜಂಟಿ/ಉಪ ಕಾರ್ಯದರ್ಶಿ | 01 |
| 02 | ಶೀಘ್ರಲಿಪಿಗಾರರು | 01 |
| 03 | ಕಿರಿಯ ಸಹಾಯಕರು | 01 |
| 04 | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಲೆಕ್ಕ ಪತ್ರ ಇಲಾಖೆಯಿಂದ ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 01 |
| 05 | ಸಹಾಯಕ ನಿರ್ದೇಶಕರು /ಉಪ ನಿರ್ದೇಶಕರು (ವೇತನ ಶ್ರೇಣಿ ರಹಿತ ಹುದ್ದೆ) | 01 |
| 06 | ಪ್ರೋಗ್ರಾಮರ್ | 01 |
| 07 | ಶೀಘ್ರಲಿಪಿಗಾರರು /ಡಾಟಾ ಎಂಟ್ರಿ ಆಪರೇಟರ್ | 01 |
| 08 | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು*/ ಸಹ ನಿರ್ದೇಶಕರು/ ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ. (ವೇತನ ಶ್ರೇಣಿ ರಹಿತ ಹುದ್ದೆ) | 02 |
| 09 | ಶಾಖಾಧಿಕಾರಿ | 01 |
| 10 | ಹಿರಿಯ ಸಹಾಯಕರು | 01 |
| 11 | ಶೀಘ್ರಲಿಪಿಗಾರರು | 01 |
| 12 | ಬೆರಳಚ್ಚುಗಾರರು | 01 |
| 13 | ಟೆಕ್ನಿಷಿಯನ್(ಗ್ರೂಪ್–ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 01 |
| 14 | ವಾಹನ ಚಾಲಕ | 01 |
| 15 | ಡಾಟಾ ಎಂಟ್ರಿ ಆಪರೇಟರ್ | 01 |
| 16 | ಹಿರಿಯ ಸಹಾಯಕ | 01 |
| 17 | ಸಹಾಯಕ | 01 |
| 18 | ಕಿರಿಯ ಸಹಾಯಕ | 01 |
| | **ಒಟ್ಟು** | **19 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ(ಸೇವೆಗಳು–6)

**PR.759**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಸೃಜಿಸಲಾಗಿರುವ ಬಾಲ ಕಾರ್ಮಿಕರ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 100 ಸಸಿವಿ 1997; ದಿನಾಂಕ:17–06–1997.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2004; ದಿನಾಂಕ:19–11–2004.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 343 ಸಅಸೇ 2009; ದಿನಾಂಕ:10–07–2009
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 280 ಸಅಸೇ 2010; ದಿನಾಂಕ:07–06–2010.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 458 ಸಅಸೇ 2008, ದಿನಾಂಕ:25–02–2011.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 284 ಸಅಸೇ 2011, ದಿನಾಂಕ:16–06–2011.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 365 ಸಅಸೇ 2012, ದಿನಾಂಕ:27–06–2012
8. ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ: ಕಾಇ 30 ಸಿಎಲ್‌ಸಿ 2013.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಬಾಲ ಕಾರ್ಮಿಕ ಕೋಶವನ್ನು ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ(5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಾರ್ಮಿಕ ಇಲಾಖೆಯ (ಬಾಲ ಕಾರ್ಮಿಕ ಕೋಶ)ದಲ್ಲಿನ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಜಂಟಿ ಕಾರ್ಯದರ್ಶಿ ವೃಂದಕ್ಕೆ ಉನ್ನತೀಕರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:18–06–2012 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಮತ್ತು ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2 | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3 | ಸಹಾಯಕರು | 2 ಹುದ್ದೆಗಳು |
| 4 | ಶೀಘ್ರಲಿಪಿಗಾರರು | 1 ಹುದ್ದೆ |
| 5 | ವಾಹನ ಚಾಲಕರು | 1 ಹುದ್ದೆ |
| 6 | ಗ್ರೂಪ್–ಡಿ | 1 ಹುದ್ದೆ |
| | **ಒಟ್ಟು ಹುದ್ದೆಗಳ ಸಂಖ್ಯೆ** | **7 ಹುದ್ದೆಗಳು** |

ಮೇಲೆ ಕ್ರಮ ಸಂಖ್ಯೆ(8)ರಲ್ಲಿ ಓದಲಾದ ಕಾರ್ಮಿಕ ಇಲಾಖೆಯ ಕಡತದಲ್ಲಿ ಬಾಲ ಕಾರ್ಮಿಕ ಕೋಶ ಹಾಗೂ ಕ್ರಮ ಸಂಖ್ಯೆ(2) ರಿಂದ (6) ರವರೆಗಿನ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 470 ಸಅಸೇ 2013 ಬೆಂಗಳೂರು, ದಿನಾಂಕ: 3ನೇ ಜುಲೈ 2013**

ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ: 18–06–2013 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2 | ಸಹಾಯಕರು | 2 ಹುದ್ದೆಗಳು |
| 3 | ಶೀಘ್ರಲಿಪಿಗಾರರು | 1 ಹುದ್ದೆ |
| 4 | ವಾಹನ ಚಾಲಕರು | 1 ಹುದ್ದೆ |
| 5 | ಗ್ರೂಪ್–ಡಿ | 1 ಹುದ್ದೆ |
| | **ಒಟ್ಟು ಹುದ್ದೆಗಳ ಸಂಖ್ಯೆ** | **6 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96; ದಿನಾಂಕ:10-07-1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು. ಇಲಾಖೆ(ಸೇವೆಗಳು-6)

**PR.754**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಸರ್ಕಾರದ ಕಾರ್ಯದರ್ಶಿ(ವಿತ್ತೀಯ ಸುಧಾರಣೆ) ವಿಭಾಗದಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 460 ಸಅಸೇ 2007; ದಿನಾಂಕ:25-02-2008.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಿಶಾಸೇ 2008; ದಿನಾಂಕ:23-05-2008.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸು 45 ಸಿಶಾಸೇ 2009; ದಿನಾಂಕ:25-04-2009.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಸಅಸೇ 2010; ದಿನಾಂಕ:17-09-2010.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 163 ಸಅಸೇ 2011; ದಿನಾಂಕ:19-03-2011.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 611 ಸಅಸೇ 2011; ದಿನಾಂಕ:09-02-2012.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 558 ಸಅಸೇ 2012; ದಿನಾಂಕ:03-09-2012.
8. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 134 ಸಮಯ 2012; ದಿನಾಂಕ:19-02-2013.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ಒಂದು ಲೆಕ್ಕಾಧೀಕ್ಷಕರ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ: (2) ಮತ್ತು (3)ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ಲೆಕ್ಕಾಧಿಕಾರಿ ಹುದ್ದೆಯನ್ನು ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನಾಗಿ ಉನ್ನತೀಕರಿಸಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಶಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ದಿನಾಂಕ:25.02.2009 ರಿಂದ 24.02.2011 ರವರೆಗೆ ಮತ್ತು ಲೆಕ್ಕಾಧೀಕ್ಷಕರ ಹುದ್ದೆಯನ್ನು ದಿನಾಂಕ:25.05.2010 ರಿಂದ 24.05.2011 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು(ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ದಿನಾಂಕ: 25-02-2012 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ ಮತ್ತು ಯೋಜನಾ ಮೇಲ್ವಿಚಾರಣಾ ಘಟಕ) ಈ ಹುದ್ದೆಯನ್ನು ಕಾರ್ಯದರ್ಶಿ(ವಿತ್ತೀಯ ಸುಧಾರಣೆ) ಹುದ್ದೆಗೆ ಉನ್ನತೀಕರಿಸಿ ಆದೇಶಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಅ.ಟಿ.ಯಲ್ಲಿ ಆರ್ಥಿಕ ಇಲಾಖೆಯ ಕಾರ್ಯದರ್ಶಿ(ವಿತ್ತೀಯ ಸುಧಾರಣೆ) ಶಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ದಿನಾಂಕ:25-02-2013 ರಿಂದ ದಿನಾಂಕ:24-02-2014 ರವರೆಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 461 ಸಅಸೇ 2013 ಬೆಂಗಳೂರು, ದಿನಾಂಕ: 3ನೇ ಜುಲೈ 2013**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ಕಾರ್ಯದರ್ಶಿ (ವಿತ್ತೀಯ ಸುಧಾರಣೆ) ವಿಭಾಗದಲ್ಲಿನ ಲೆಕ್ಕಪರಿಶೋದನಾಧಿಕಾರಿ ಹುದ್ದೆಯನ್ನು ದಿನಾಂಕ:25-02-2013 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ:10.07.1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿ -ಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು. ಇಲಾಖೆ(ಸೇವೆಗಳು-6)

**PR.758**

## ಶಿಕ್ಷಣ ಸಚಿವಾಲಯ

**ಸಂಖ್ಯೆ: ಇಡಿ 193 ಡಿಜಿಓ 2009 ಬೆಂಗಳೂರು, ದಿನಾಂಕ:14/05/2013.**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ: ಇಡಿ 193 ಡಿಜಿಓ 2009 ದಿನಾಂಕ: 18/02/2011ರ ಆದೇಶದ ಭಾಗದಲ್ಲಿ ನಮೂದಾಗಿರುವ **" ಅವರ ನಿವೃತ್ತಿ ವೇತನ / ಕುಟುಂಬ ನಿವೃತ್ತಿ ವೇತನದಲ್ಲಿ ಶೇಕಡ 50 ರಷ್ಟನ್ನು ಕೂಡಲೇ ಜಾರಿಗೆ ಬರುವಂತೆ ಸರ್ಕಾರಕ್ಕೆ ನಷ್ಟ ಉಂಟಾಗಿರುವ ರೂ.42,73,315/-ಗಳ ಮೊತ್ತ ವಸೂಲಾಗುವವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ, ಆದೇಶಿಸಿದೆ "** ಎಂಬುದನ್ನು **" ಅವರ ನಿವೃತ್ತಿ ವೇತನದಲ್ಲಿ ಶೇಕಡ 50 ರಷ್ಟನ್ನು ಅವರ ಜೀವಿತಾವಧಿಯವರೆವಿಗೆ (ಶಾಶ್ವತವಾಗಿ) ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ "** ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು.

ಶ್ರೀ ರೇವಣಸಿದ್ದಪ್ಪ ಹರಸೂರು, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿ, ಗುಲ್ಬರ್ಗಾ ಉತ್ತರ ವಲಯ ಅವರಿಂದ ಸರ್ಕಾರಕ್ಕೆ ಆದ ನಷ್ಟವನ್ನು ನಿಯಮಾನುಸಾರ ವಸೂಲಿ ಮಾಡಬೇಕಾಗಿರುವುದರಿಂದ ಅವರ ತಡೆಹಿಡಿಯಲಾದ ಡಿ.ಸಿ.ಆರ್.ಜಿ ಮೊತ್ತ ರೂ 1,38,600/–(ಒಂದು ಲಕ್ಷದ ಮೂವತ್ತೆಂಟು ಸಾವಿರದ ಆರು ನೂರು ಮಾತ್ರ) ಹಾಗೂ ಕಮ್ಯೂಟೇಷನ್ ಮೊತ್ತ ರೂ 1,75,728/–(ಒಂದು ಲಕ್ಷದ ಎಪ್ಪತ್ತೈದು ಸಾವಿರದ ಏಳುನೂರ ಇಪ್ಪತ್ತೆಂಟು ಮಾತ್ರ) ಒಟ್ಟಾರೆ ಮೊತ್ತ 3,14,328/–(ಮೂರು ಲಕ್ಷದ ಹದಿನಾಲ್ಕು ಸಾವಿರದ ಮೂನ್ನೂರ ಇಪ್ಪತ್ತೆಂಟು ಮಾತ್ರ) ಬಿಡುಗಡೆಗೊಳಿಸದಂತೆ ಹಾಗೂ ಮುಂದಿನ ಆದೇಶದವರೆಗೆ ತಡೆಹಿಡಿದ್ದು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡಿಕೊಳ್ಳಲು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ರವರನ್ನು ಕೋರಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶ್ರೀಪಾದು.ಹೆಚ್.ಎನ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಸಮಿತಿಗಳು)

**PR.662**

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಜಿ.ಮಲ್ಲಿಕಾರ್ಜುನ, ಕ್ಷೇತ್ರ ಶಿಕ್ಷಣಾಧಿಕಾರಿ, ರಾಯಚೂರು ಜಿಲ್ಲೆ ಇವರ ವಿರುದ್ದ ದಾಖಲಾದ ದೂರಿನ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಅಪರ ನಿಬಂಧಕರು ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಅ.ಸ. ಪತ್ರ ಸಂ:ಕಂಪ್ಲೇಟ್/ಉಪಲೋಕ್/ ಜಿಎಲ್‌ಬಿ–43/2011/ಎಆರ್‌ಇ–ದಿನಾಂಕ:08/04/2013.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ:08/04/2013ರ ಅರೆ ಸರ್ಕಾರಿ ಪತ್ರದಲ್ಲಿ ಅಪರ ನಿಬಂಧಕರು ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ–12(3) ರಡಿ ಮಾನ್ಯ ಉಪ ಲೋಕಾಯುಕ್ತ ರವರು ದಿನಾಂಕ: 01/04/2013ರಂದು ನೀಡಿರುವ ಮೂಲ ವರದಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕಳುಹಿಸಿರುತ್ತಾರೆ. ಆಪಾದಿತರಾದ ಶ್ರೀ ಜಿ.ಮಲ್ಲಿಕಾರ್ಜುನ, ಕ್ಷೇತ್ರ ಶಿಕ್ಷಣಾಧಿಕಾರಿ, ರಾಯಚೂರು ಜಿಲ್ಲೆ ರವರ ವಿರುದ್ದ ಮಾನ್ಯ ಉಪ ಲೋಕಾಯುಕ್ತರ ವರದಿಯಲ್ಲಿ ಆಪಾದಿತರ ಮೇಲಿನ ದೂರಿನ ಅಂಶಗಳು ಈ ಕೆಳಗಿನಂತಿರುತ್ತದೆ:–

A suo-moto investigation was taken up after invoking Sec7(2) of Karnataka Lokayuktha Act 1984 as a case of misconduct was made out by the records in this file against Sri.G.Mallikarjun, Block Education Officer at Raichur(hereinafter referred to as respondent for short).

On the complaint of Sri. Ravindranath S/o Eranna Patti R/o Raichur, letter dated 22/06/2012 was sent to respondent calling for objection to the said complaint and to submit objection on or before 16/07/2012. The said letter was served on respondent on 02/07/2012, but respondent failed to submit objections on or before 16/07/2012. So, reminder dated 19/07/2012 was sent to respondent calling for objections again to submit on or before 16/08/2012. The said reminder (No.1) is served in the office of respondent on 30/07/2012. Still the respondent failed to submit objections on or before 16/08/2012. Of course, by letter dated 13/07/2012, respondent stated that, he has submitted parawise replies to the said complaint or 09/08/2011 to the Deputy Director of Public Instructions at Raichur. So, by letter dated 04/09/2012, respondent was instructed to submit objection to this office directly on or before 01/10/2012. The said letter was served on respondent on 10/09/2012. Still the respondent failed to submit objections to the said complaint on or before 01/10/2012, though directed in the said letter. Thereafter, by reminder(1) dated 10/10/2012, respondent was instructed to submit objection to the said complaint on or before 06/11/2012. The said reminder(1) was served on respondent on 25/10/2012. Still the respondent failed to submit objections on or before 06/11/2012. So, a show cause notice dated 09/11/2012 was sent to respondent by RPAD with direction to show cause on or before 12/12/2012 as to why disciplinary proceedings should not be initiated against respondent for not filing objection and not responding to our letter and reminders. The said show cause notice has been served on gazetted manager of respondent on 16/11/2012. Then also, respondent failed to submit objections to the said complaint and also failed to show any cause by not filing reply to the said show cause notice.

Said facts supported by the material on record show that the respondent, being a Public/Government servant, has failed to maintain absolute devotion to duty and acted in a manner unbecoming of Public/Government Servant, and thereby **repeatedly** committed misconduct and made himself liable for disciplinary action.

Therefore, an investigation was taken up against the respondent and an observation note was sent to respondent to show cause as to why recommendation should not be made to the Competent Authority for initiating departmental inquiry against him about his misconduct in the matter For that, the respondent filed his reply, But, as ordered in the file, the same has not been found convincing to drop the proceedings.

Since said facts and material on record prima-facie show that the respondent has committed misconduct as per Rule 3(1) (ii) and (iii) of KCS (Conduct) Rules, 1966, now, acting under Section 12(3) of the Karnataka Lokayukta Act, recommendation is made to the Competent Authority to initiate disciplinary proceedings against the respondent and to entrust the inquiry to this Authority under Rule 14-A of Karnataka Civil Services (Classification, Control and Appeal) Rules, 1957.

ಮಾನ್ಯ ಅಪರ ನಿಬಂಧಕರು ವಿಚಾರಣೆಗಳು – 6 ರವರ ವರದಿಯಲ್ಲಿ ಶ್ರೀ ಜಿ.ಮಲ್ಲಿಕಾರ್ಜುನ, ಕ್ಷೇತ್ರ ಶಿಕ್ಷಣಾಧಿಕಾರಿ, ರಾಯಚೂರು ಜಿಲ್ಲೆ ಇವರಿಗೆ ಬರೆದಿರುವ ಪತ್ರಗಳಿಗೆ, ನೆನಪೋಲೆ ಹಾಗೂ ಕಾರಣ ಕೇಳುವ ನೋಟಿಸ್‌ಗೆ ಸದರಿಯವರು ಸ್ಪಂದಿಸಿಲ್ಲವಾದ್ದರಿಂದ ಆರೋಪಿತರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3(i),(ii) & (iii) ರ ಪ್ರಕಾರ ದುರ್ನಡತೆ ಎಸಗಿದ್ದು, ಅವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳುವಂತೆ ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರ ಅನ್ವಯ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರನ್ವಯ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 28 ಡಿಜಿಓ 2013, ಬೆಂಗಳೂರು, ದಿನಾಂಕ: 27ನೇ ಮೇ 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಜಿ.ಮಲ್ಲಿಕಾರ್ಜುನ, ಕ್ಷೇತ್ರ ಶಿಕ್ಷಣಾಧಿಕಾರಿ, ರಾಯಚೂರು ಜಿಲ್ಲೆ ಇವರ ವಿರುದ್ಧ ದಾಖಲಾದ ದುರ್ನಡತೆ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ಈ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ರನ್ವಯ ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶ್ರೀಪಾದು.ಹೆಚ್.ಎನ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಮಿತಿಗಳು)

**PR.661**

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗ್ರಾಮೀಣ ವಲಯ, ಗದಗ ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರ ಅ.ಸ. ಪತ್ರ ಸಂಖ್ಯೆ:ಜಿಪಂಗ:ಮುಕಾನಿ:ಆಶಾ:111–12, ದಿನಾಂಕ: 29/09/2011.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 62 ಡಿಜಿಓ 2011 ದಿನಾಂಕ: 09/11/2011
3. ಸರ್ಕಾರದ ಪತ್ರ ಸಂಖ್ಯೆ: ಇಡಿ 62 ಡಿಜಿಓ 2011 ದಿನಾಂಕ: 08/12/2011.
4. ಸರ್ಕಾರದ ಕಾರಣ ಕೇಳುವ ನೋಟಿಸು ಸಂಖ್ಯೆ: ಇಡಿ 62 ಡಿಜಿಓ 2011, ದಿನಾಂಕ:16/01/2013.
5. ಆಪಾದಿತ ಅಧಿಕಾರಿ ಶ್ರೀ ಎಸ್.ಎಸ್.ಗುಡ್ಲಾನೂರ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 04/02/2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1) ರಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರ ಅ.ಸ.ಪತ್ರದಲ್ಲಿ ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗ್ರಾಮೀಣ ವಲಯ, ಗದಗ ಇವರ ಅನುಚಿತ ವರ್ತನೆ ಕುರಿತು ವರದಿ ಸಲ್ಲಿಸಿ, ಜಿಲ್ಲೆಯಿಂದ ವರ್ಗಾವಣೆ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ಶ್ರೀ ಎಸ್.ಎಸ್.ಗುಡ್ಲಾನೂರ ಇವರನ್ನು ಹಿರಿಯ ಉಪನ್ಯಾಸಕರು, ಡಯಟ್, ಉಡುಪಿ ಇಲ್ಲಿಗೆ ವರ್ಗಾಯಿಸಿ ಆದೇಶಿಸಲಾಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರು ಮಾಡಿರುವ ಶಿಫಾರಸ್ಸಿನಂತೆ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಸಂಬಂಧ ಅನುಬಂಧ – 1 ರಿಂದ 4ರವರೆಗೆ ಕರಡು ದೋಷಾರೋಪಣಾ ಪಟ್ಟಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ರವರು ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗ್ರಾಮೀಣ ವಲಯ, ಗದಗ ಇವರ ವಿರುದ್ಧದ 3 ಆರೋಪಗಳ ಸಂಬಂಧ ಕರಡು ದೋಷಾರೋಪಣಾ ಪಟ್ಟಿಯನ್ನು ಕಳುಹಿಸಿರುತ್ತಾರೆ.

ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ರವರು ಕಳುಹಿಸಿದ್ದ ಕರಡು ಆರೋಪ ಪಟ್ಟಿಯನ್ನು ಪರಿಶೀಲಿಸಿ ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗ್ರಾಮೀಣ ವಲಯ, ಗದಗ ಇವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 16/01/2013ರಲ್ಲಿ ನಿಯಮ 11ರಡಿ ಶಿಸ್ತು ಕ್ರಮ ಜರುಗಿಸಲು ತೀರ್ಮಾನಿಸಿ ಈ ಕೆಳಕಂಡ ಆರೋಪಗಳ ಸಂಬಂಧ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿರುತ್ತದೆ.

**ಆರೋಪ: 1 –** ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗದಗ ಗ್ರಾಮೀಣ ವಲಯ ಆದ ನೀವು ದಿನಾಂಕ: 08/09/2011ರಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ನರಸಾಪುರ ತಾಲ್ಲೂಕು, ಗದಗ ಇಲ್ಲಿ ಅಂತರ ರಾಷ್ಟ್ರೀಯ

ಸಾಕ್ಷರತಾ ದಿನಾಚರಣೆ ಸಂದರ್ಭದಲ್ಲಿ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ ಇವರೊಂದಿಗೆ ಅನುಚಿತವಾಗಿ, ಅಸಭ್ಯವಾಗಿ ವರ್ತಿಸಿರುತ್ತೀರಿ.

**ಆರೋಪ: 2** – ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗದಗ ಗ್ರಾಮೀಣ ವಲಯ ಆದ ನೀವು ನಿಮ್ಮ ವ್ಯಾಪ್ತಿಯಲ್ಲಿಯ ಶಿಕ್ಷಕರ ಮೇಲೆ ಹಿಡಿತ ಸಾಧಿಸುವಲ್ಲಿ ವಿಫಲರಾಗಿರುತ್ತೀರಿ. ಹಾಗೂ ಶಿಕ್ಷಕಿಯರೊಂದಿಗೆ ಅನುಚಿತವಾಗಿ ವರ್ತಿಸಿ ಇಲಾಖೆಗೆ ಕೆಟ್ಟ ಹೆಸರು ಬರುವಂತೆ ಮಾಡಿರುತ್ತೀರಿ.

**ಆರೋಪ: 3** – ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗದಗ ಗ್ರಾಮೀಣ ವಲಯ ಆದ ನೀವು ಸರ್ವ ಶಿಕ್ಷಣ ಅಭಿಯಾನ ಅನುಷ್ಠಾನದಲ್ಲಿ ಆಸಕ್ತಿ ವಹಿಸದೇ ಇಲಾಖೆ ಅಭಿವೃದ್ಧಿ ಕೆಲಸಗಳು ಕುಂಠಿತಗೊಳ್ಳಲು ಕಾರಣರಾಗಿರುತ್ತೀರಿ.

ಮೇಲೆ ಓದಲಾದ ಕ್ರಮ ಸಂಖ್ಯೆ: (5) ದಿನಾಂಕ: 04/02/2013ರಲ್ಲಿ ಆಪಾದಿತರು ದೋಷಾರೋಪಣಾ ಪಟ್ಟಿಗೆ ಲಿಖಿತ ಪ್ರತಿ ರಕ್ಷಣಾ ಹೇಳಿಕೆಯನ್ನು ನೀಡಿ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ. ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುವಂತೆ ಕಂಡು ಬಂದ ಹಿನ್ನಲೆಯಲ್ಲಿ ಸರ್ಕಾರವು ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣೆಯನ್ನು ನಡೆಸಲು ನಿರ್ಧರಿಸಿ, ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 62 ಡಿಜಿಓ 2011, ಬೆಂಗಳೂರು, ದಿನಾಂಕ: 14ನೇ ಮೇ 2013**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಎಸ್.ಎಸ್. ಗುಡ್ಲಾನೂರ, ಕ್ಷೇತ್ರ ಶಿಕ್ಷಣಾಧಿಕಾರಿ, ಗ್ರಾಮೀಣ ವಲಯ, ಗದಗ ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎನ್.ಪಾಟೀಲ್, ನಿವೃತ್ತ ನ್ಯಾಯಾಧೀಶರು, ಬಿಜಾಪುರ ಇವರನ್ನು ಈ ಪ್ರಕರಣದ ವಿಚಾರಣಾಧಿಕಾರಿಯನ್ನಾಗಿಯು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(5)(ಸಿ)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣೆ ನಡೆಸಲು ಸ್ಥಳಾವಕಾಶವನ್ನು ಹಾಗೂ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸೇವೆಯನ್ನು ವಿಚಾರಣಾಧಿಕಾರಿಯವರಿಗೆ ಒದಗಿಸಲು ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರಿಗೆ ಸೂಚಿಸಿದೆ.

ವಿಚಾರಣೆ ಮುಕ್ತಾಯಗೊಳಿಸಿ, ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿದ ನಂತರ ಅವರಿಗೆ ` 15,000/–ಗಳ ಸಂಭಾವನೆ(ವಾಹನ ಭತ್ಯೆಯೂ ಸೇರಿರುತ್ತದೆ) ಪಾವತಿಸಲು ಸೂಚಿಸಿದೆ.

ವಿಚಾರಣಾಧಿಕಾರಿಗಳು ಪ್ರತಿ ಆರೋಪದ ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ, ಸ್ಪಷ್ಟ ನಿರ್ಣಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ 2 ತಿಂಗಳೊಳಗೆ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶ್ರೀಪಾದು.ಹೆಚ್.ಎನ್**

ಸರ್ಕಾರದ ಅಧೀನ ಕಾರ್ಯದರ್ಶಿ

**PR.660** ಶಿಕ್ಷಣ ಇಲಾಖೆ (ಸಮಿತಿಗಳು)

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ತಿಮ್ಮರಾಜು, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಪವಾಗಡ ಹಾಲಿ ವಯಸ್ಕರ ಶಿಕ್ಷಣಾಧಿಕಾರಿ ಚಿತ್ರದುರ್ಗ ಇವರ ವಿರುದ್ದದ ಆರೋಪದ ಸಂಬಂಧ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ ಆದೇಶ.

**ಓದಲಾಗಿದೆ:**

1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ2(5)ದೂರು 30/ 2011–12 ದಿನಾಂಕ: 16/07/2012.
2. ಸರ್ಕಾರದ ಕಾರಣ ಕೇಳುವ ನೋಟಿಸು ಸಂಖ್ಯೆ: ಇಡಿ 39 ಡಿಜಿಓ 2012, ದಿನಾಂಕ:11/09/2012.
3. ಆಪಾದಿತ ಅಧಿಕಾರಿ ಶ್ರೀ ತಿಮ್ಮರಾಜು ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 06/11/2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಶ್ರೀ ತಿಮ್ಮರಾಜು, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಪವಾಗಡ ಹಾಲಿ ವಯಸ್ಕರ ಶಿಕ್ಷಣಾಧಿಕಾರಿ ಚಿತ್ರದುರ್ಗ ಇವರು ಪಾವಗಡ ತಾಲ್ಲೂಕಿನಲ್ಲಿ ಕೆಲಸ ನಿರ್ವಹಿಸುತ್ತಿದ್ದ ಅವಧಿಯಲ್ಲಿ 2008–09ನೇ ಸಾಲಿನ ಡಾ॥ನಂಜುಂಡಪ್ಪ ರವರ ವರದಿ ಆಧರಿಸಿ ರಾಜ್ಯದಲ್ಲಿ ಶೈಕ್ಷಣಿಕವಾಗಿ ಹಿಂದುಳಿದವರ ಬ್ಲಾಕ್‌ಗಳಲ್ಲಿನ ಸರ್ಕಾರಿ ಪ್ರೌಢ ಶಾಲೆಗಳಿಗೆ ಕುಡಿಯುವ ನೀರು ಮತ್ತು ಶೌಚಾಲಯ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆಯಾಗಿರುತ್ತದೆ. ಸದರಿ ಅನುದಾನದಲ್ಲಿ ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು ಇವರು ದಿನಾಂಕ: 21/07/2011ರಲ್ಲಿ ` 44,820/–ಗಳ ಚೆಕ್ ಸಂಖ್ಯೆ:040234 ದಿನಾಂಕ: 24/07/2010ರಲ್ಲಿ ವೋಚರ್ ಚೆಕ್‌ನ್ನು ಶ್ರೀ ತಿಮ್ಮರಾಜು, ಕ್ಷೇತ್ರ ಶಿಕ್ಷಣಾಧಿಕಾರಿ, ಪಾವಗಡ ಇವರಿಗೆ ಮುದ್ದಾಂ ನೀಡಿ ಸ್ವೀಕೃತಿ ಪಡೆದಿದ್ದು ಸದರಿ ಚೆಕ್‌ನ್ನು ಪಡೆದು ಕಛೇರಿ ಕಡತದಲ್ಲಿ ನಿರ್ವಹಿಸದೆ ಮತ್ತು ಚೆಕ್‌ನ ಹಣವನ್ನು ಕ್ಷೇತ್ರ ಶಿಕ್ಷಣಾಧಿಕಾರಿ, ಪಾವಗಡ ಇವರು ಬ್ಯಾಂಕ್ ಖಾತೆಗೆ ಜಮಾ ಮಾಡದೆ ಚೆಕ್‌ನ ಹಿಂಭಾಗದಲ್ಲಿ ಸಹಿ ಮಾಡಿ ಬ್ಯಾಂಕಿಗೆ ಸಲ್ಲಿಸಿ ನೇರವಾಗಿ ಹಣವನ್ನು ಪಡೆದು ಸ್ವಂತಕ್ಕೆ ಬಳಸಿಕೊಂಡಿದ್ದು ಕಾರ್ಯಕ್ರಮವನ್ನು ಅನುಷ್ಠಾನ ಮಾಡಿರುವುದಾಗಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ಪ್ರೌಢಶಾಲಾ ಮುಖ್ಯಸ್ಥರಿಂದ ಪಡೆದು ಸಲ್ಲಿಸಿದ್ದು ಇದ್ದರಿಂದ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡು ಸರ್ಕಾರಕ್ಕೆ ನಷ್ಟ ಮಾಡಿದ್ದು ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ನಿಯಮ 11 ರಡಿ ಕರಡು ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ.

